ಕರ್ಣಾಟಕ ಗ್ರಂಥಮಾಲಾ—೧೦೬.

# ಕನಕೋರ್ಣಾರ್ಜನ

## (ಯವನಪುರಾಣಕಥಾವಳಿ—೧)



ಬಿ. ಕೃಷ್ಣಪ್ಪ, ಎಂ. ಎ.,
ಅವರಿಂದ ವಿರಚಿತವಾದುದು,



ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

೧೯೩೯

---



ಕ್ರಯ ೦—೬—೦

## ಪೀಠಿಕೆ.

---

ಆಂಗ್ಲೇಯಭಾಷೆಯಲ್ಲಿ ರಚಿತವಾಗಿರುವ "ದಿ ಗೋಲ್ಡನ್ ಫ್ಲೀಸ್" (The Golden Fleece) ಎಂಬ ಗ್ರೀಕ್ ಪುರಾಣಕಥೆಯ ಆಧಾರದಿಂದ ಈ ಗ್ರಂಥವನ್ನು ರಚಿಸಲಾಗಿದೆ. ಪಾಶ್ಚಾತ್ಯಭಾಷೆಗಳಲ್ಲಿ ಹುಟ್ಟಿರುವ ಇಂತಹ ಹಲವು ಯವನಪುರಾಣಕಥೆಗಳನ್ನು ಸಣ್ಣ ವಯಸ್ಸಿನ ಪಾಶ್ಚಾತ್ಯ ಬಾಲಕಬಾಲಕಿಯರು ಬಹಳ ಪ್ರೀತಿಯಿಂದ ಅನೇಕಾವೃತ್ತಿ ಓದುವರು. ಕನ್ನಡಿಗರಿಗೂ ಇಂತಹ ಕಥೆಗಳನ್ನು ಪರಿಚಯಮಾಡಿಸಿಕೊಡಬೇಕೆಂಬ ಉದ್ದೇಶದಿಂದ ಗ್ರೀಕರಲ್ಲಿ ರೂಢಿಯಲ್ಲಿದ್ದ ನಾಮಧೇಯಗಳನ್ನೇ ನಿಲ್ಲಗೊಡಿಸಿ ಈಗ ಈ ಸಣ್ಣ ಕಥೆಯನ್ನು ಕರ್ಣಾಟಕ ಭಾಷಾಭಿಮಾನಿಗಳಿಗೆ ಒಪ್ಪಿಸಲಾಗಿದೆ.

ಮೈಸೂರು,
೬—೩—೧೯೨೪.

ಬಿ. ಕೃಷ್ಣಪ್ಪ.



**ಸೂಚನೆ :—**

ಈ ಮುದ್ರಣದ ಪ್ರತಿಗಳ ಮೊದಲನೆಯ ಪುಟದಲ್ಲಿ ಕರ್ಣಾಟಕ ಗ್ರಂಥಮಾಲೆಯ ಆಫೀಸಿನ ಮುದ್ರೆಯೂ ಆಫೀಸ್ ಮ್ಯಾನೇಜರನ ಹಸ್ತಾಕ್ಷರಗಳೂ ಇರುವವುಗಳನ್ನೇ ನೋಡಿ ಗ್ರಾಹಕರು ತೆಗೆದುಕೊಳ್ಳಬೇಕೆಂದು ಕೋರಿದೆ.

ಮೈಸೂರು,
೧೦—೪—೧೯೨೯.

ಮ್ಯಾನೇಜರ್,
ಕರ್ಣಾಟಕಗ್ರಂಥಮಾಲೆಯ ಆಫೀಸು,

# ಕನಕೋರ್ಣಾರ್ಜನ.

## ಮೊದಲನೆಯ ಪ್ರಕರಣ.

### ಜೇಸನ್ನಿನ ಬಾಲ್ಯವು.

"ಕನಕೋರ್ಣಾರ್ಜನ" ವೆಂಬ ಹೆಸರನ್ನು ಕೇಳಿದ ಕೂಡಲೆ "ಅಬ್ಬಬ್ಬ! ಎಷ್ಟು ದೊಡ್ಡ ಹೆಸರು! ಇಂತಹ ಹೆಸರುಳ್ಳ ಗ್ರಂಥವು ನಮಗೆ ತಿಳಿಯುವುದೇ?" ಎಂದು ಹೆದರಬೇಕಾಗಿಲ್ಲ. 'ಕನಕ' ಎಂದರೆ ಚಿನ್ನ; 'ಊರ್ಣಾ' ಎಂದರೆ ಉಣ್ಣೆ; 'ಆರ್ಜನ' ಎಂದರೆ ಸಂಪಾದನೆ. ಆದುದರಿಂದ ಈ ಹೆಸರಿಗೆ "ಚಿನ್ನದ ಉಣ್ಣೆಯನ್ನು ಸಂಪಾದಿಸುವುದು' ಎಂದು ಅರ್ಥವು.

೨. ಈಗ್ಗೆ ಮೂರುಸಾವಿರ ವರ್ಷಗಳ ಹಿಂದೆ ಗ್ರೀಸ್ ದೇಶದಲ್ಲಿ ಅನೇಕ ಶೂರರು ವಾಸವಾಗಿದ್ದರು. ಅವರಲ್ಲಿ ಪ್ರತಿಯೊಬ್ಬನೂ ಬಹಳ ಆಶ್ಚರ್ಯಕರವಾದ ಕೆಲಸಗಳನ್ನು ಮಾಡಿ ಪ್ರಖ್ಯಾತನಾಗಿದ್ದನು. ಆ ಶೂರರುಗಳಲ್ಲಿ ಒಬ್ಬನಾದ ಜೇಸನ್ ಎಂಬಾತನು ಚಿನ್ನದ ಉಣ್ಣೆಯನ್ನು ಸಂಪಾದಿಸಿಕೊಂಡು ಬಂದ ವೃತ್ತಾಂತವನ್ನು ಈ ಕಥೆಯಲ್ಲಿ ವಿವರಿಸಲಾಗುವುದು.

೩. ಗ್ರೀಸಿನ ಒಂದು ಪ್ರದೇಶವಾದ ಥೆಸೆಲಿ ಎಂಬ ಪ್ರಾಂತದಲ್ಲಿ ಐಯೂಲ್ಕಾಸ್ ಎಂಬ ಪಟ್ಟಣವಿದ್ದಿತು. ಇದರಲ್ಲಿ ಏಸನ್ ಎಂಬೊಬ್ಬ ರಾಜನು ಸುಖವಾಗಿ ಆಳಿಕೊಂಡಿದ್ದನು. ಅವನಿಗೆ ಪೀಲಿಯಾಸ್ ಎಂಬೊಬ್ಬ ಬಲತಮ್ಮನೂ, ಜೇಸನ್ ಎಂಬೊಬ್ಬ ಮಗನೂ ಇದ್ದರು. ಪೀಲಿಯಾಸನು ಬಹಳ ಆಶಾಪರನು, ಕುತಂತ್ರಿಯು. ಆದುದರಿಂದ ಅವನು ತನ್ನ ಅಣ್ಣನಿಗೆ ದ್ರೋಹಮಾಡಿ ಅವನ ರಾಜ್ಯವನ್ನು ಅಪಹರಿಸಿದನು. ಆದರೆ ಏಸನ್ನನು ತನ್ನ ರಾಜ್ಯವನ್ನು ಬಿಟ್ಟು ಹೋಗುವುದಕ್ಕೆ ಮುಂಚೆ, ತನ್ನ ಮಗನಿಗೆ ವಯಸ್ಸು ಬಂದಕೂಡಲೆ ರಾಜ್ಯವನ್ನು ಬಿಟ್ಟುಕೊಡಬೇಕೆಂದು ಪೀಲಿಯಾಸಿನೊಡನೆ ಒಪ್ಪಂದವನ್ನು ಮಾಡಿಕೊಂಡನು.

ಪೀಲಿಯಾಸನು ಮನಸ್ಸಿಲ್ಲದಿದ್ದರೂ " ಮುಂದಿನ ಮಾತು ಮುಂದಕ್ಕೆ ನೋಡುವ" ಎಂದುಕೊಂಡು ಆ ಒಪ್ಪಂದಕ್ಕೆ ಸಮ್ಮತಿಸಿ ರಾಜ್ಯವನ್ನು ವಶಪಡಿಸಿಕೊಂಡನು.

೪. ಈ ಕಾಲದಲ್ಲಿ ಖೈರ್ರ* ಎಂಬೊಬ್ಬ ಗುರುವಿದ್ದನು. ಇವನು ಬಹಳ ವಿಲಕ್ಷಣಪುರುಷನು: ಇವನಿಗೆ ನಡುವಿನಿಂದ ಕೆಳಭಾಗವೆಲ್ಲಾ ಕುದುರೆಯ ಆಕಾರವಾಗಿಯೂ, ಉಳಿದ ಭಾಗವೆಲ್ಲಾ ಮನುಷ್ಯನ ಆಕೃತಿಯಾಗಿಯೂ ಇದ್ದುವು. ರೂಪವು ಹೀಗೆ ವಿಲಕ್ಷಣವಾಗಿದ್ದರೂ ಇವನ ಜ್ಞಾನವು ಅಪಾರವಾಗಿದ್ದಿತು: ಮುಂದೆ ನಡೆಯುವ ಸಂಗತಿಗಳೂ ಇವನಿಗೆ ತಿಳಿದಿದ್ದುವು. ಇದರ ಜೊತೆಗೆ, ಮರಣವುಂಟಾಗಬಾರದೆಂಬ ಒಂದು ವರವನ್ನೂ ಇವನು ಪಡೆದುಕೊಂಡಿದ್ದುದರಿಂದ, ಖೈರನ್ನಿನ ವಯಸ್ಸು ಇಷ್ಟೇ ಎಂದು ಹೇಳಲಾಗುತ್ತಿರಲಿಲ್ಲ. ಆದಕಾರಣ ಇವನು ಎಷ್ಟೋಕಾಲದಿಂದ ಗ್ರೀಸಿನ ಅನೇಕ ಶೂರರಿಗೆ ಗುರುವಾಗಿದ್ದನು. ದೇವರು, ಗುರುಹಿರಿಯರು—ಇವರ ವಿಷಯದಲ್ಲಿ ಭಕ್ತಿಯೂ, ದೀನರು, ಅನಾಥರು ದುರ್ಬಲರು—ಇಂತಹವರ ವಿಷಯದಲ್ಲಿ ಕರುಣೆಯೂ, ಸತ್ಯ, ಸಹನ, ಶೌರ್ಯ, ಪರಸ್ಪರಪ್ರೀತಿ—ಇತ್ಯಾದಿ ಸದ್ಗುಣಗಳೂ ತನ್ನ ಶಿಷ್ಯರಲ್ಲಿ ಬಳೆಯುವಂತೆ ಖೈರನ್ನನು ಬಲು ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿದ್ದುದೂ ಅಲ್ಲದೆ ಅವರಿಗೆ ಓದುಬರಹಗಳನ್ನೂ, ಕಾಳಗಮಾಡುವುದು, ಬೇಟೆಯಾಡುವುದು, ಈಜುವುದು—ಇವೇ ಮುಂತಾದ ಅಂಗಸಾಧನೆಗಳನ್ನೂ, ವೈದ್ಯ, ಸಂಗೀತ ಮೊದಲಾದ ಕಲೆಗಳನ್ನೂ ಬಹಳ ಚೆನ್ನಾಗಿ ಕಲಿಸುತ್ತಿದ್ದನು.

೫. ಇವನ ಶಿಷ್ಯರಲ್ಲಿ ಏಸ್ಕುಲೇಪಿಯಸ್ ಎಂಬವನು ನಮ್ಮ ಧನ್ವಂತರಿಯಂತೆ ವೈದ್ಯಶಾಸ್ತ್ರದಲ್ಲಿ ಬಹಳ ನಿಪುಣನಾಗಿದ್ದನು. ಇವನಿಗೆ ಸಾಧ್ಯವಲ್ಲದ ರೋಗಗಳಿರಲಿಲ್ಲ. ಇವನು ಒಂದಾನೊಂದು ಕಾಲದಲ್ಲಿ ತಂದೆಯ ಶಾಪದಿಂದ ಸತ್ತುಹೋಗಿದ್ದ ಒಬ್ಬನನ್ನು † ಬದುಕಿಸಿದನಂತೆ! ಖೈರನ್ನಿನ ಶಿಷ್ಯರುಗಳಲ್ಲಿ ಮತ್ತೊಬ್ಬನಾದ ಆರ್ಫಿಯಸ್ ಎಂಬವನು ನಮ್ಮ ತುಂಬುರನಾರದರಂತೆ ಸಂಗೀತದಲ್ಲಿ ಬಹುಪ್ರಖ್ಯಾತನಾಗಿದ್ದನು. ಇವನು ವೀಣೆಯನ್ನು ನುಡಿಸುವುದಕ್ಕೆ ಮೊದಲು ಮಾಡಿದರೆ ಪಶುಪಕ್ಷಿಗಳು ತಮ್ಮ ಮೇವನ್ನೂ ಬಿಟ್ಟು ಆಲಿಸುತ್ತ ತೆಪ್ಪನೆ ನಿಂತು

---

* ಈ ಶಬ್ದವನ್ನು ಕೆಲವರು ಷೈರನ್ ಎಂದು ಉಚ್ಚರಿಸುವರು.

† ಸತ್ತುಹೋಗಿದ್ದವನು ಥೀಸಿಯಸ್ ಎಂಬವನ ಮಗನೆಂದೂ ಅವನು ತನ್ನ ರಥದ ಕುದುರೆಗಳು ಬೆದರಿ ರಥವನ್ನು ಕೆಡಹಿದಾಗ ಸತ್ತುಹೋಗಿದ್ದನೆಂದೂ ಇನ್ನೊಂದು ಕಥೆಯು ಹೇಳುವುದು. "ಯವನಮಹಾವೀರಚರಿತೆ" ಯ ೧೫ ನೆಯ ಅಧ್ಯಾಯವನ್ನು ನೋಡಿ.

ಬಿಡುತ್ತಿದ್ದುವಂತೆ! ಹೊಳೆಗಳೂ ಸಹ ಹರಿಯದೆ ನಿಂತುಬಿಡುತ್ತಿದ್ದುವಂತೆ! ಒಣಮರಗಳೂ ಮರಳಿ ಚಿಗುರುತ್ತಿದ್ದುವೆಂದು ಹೇಳುವರು! ಖೈರನ್ನಿನ ಇತರ ಶಿಷ್ಯರುಗಳಲ್ಲಿ ಅನೇಕರು ಹೀಗೆಯೇ ಕೆಲಕೆಲವು ವಿಷಯಗಳಲ್ಲಿ ಅತ್ಯಂತ ಕುಶಲರಾಗಿದ್ದರು.

೬. ಐಯೊಲ್ಕಾಸ್ ರಾಜ್ಯವು ಮತ್ತೊಬ್ಬನ ವಶವಾಗುತ್ತಲೆ, ಏಸನ್ನನು ಅದನ್ನು ಬಿಟ್ಟು, ಇನ್ನೂ ಸಣ್ಣ ಹುಡುಗನಾಗಿದ್ದ ಜೇಸನ್ನನ್ನು ವಿದ್ಯಾಭ್ಯಾಸಕ್ಕಾಗಿ ಖೈರನ್ನಿನ ಬಳಿಗೆ ತಂದೊಪ್ಪಿಸಿ ತಾನು ತಲೆಮರೆಯಿಸಿಕೊಂಡು ಬೇರೊಂದು ರಾಜ್ಯದಲ್ಲಿ ವಾಸಮಾಡುತ್ತಿದ್ದನು. ಜೇಸನ್ನನು ಗುರುವಿನ ಬಳಿಯಲ್ಲಿ ಬಹಳ ವಿಧೇಯತೆಯಿಂದಲೂ, ಶ್ರದ್ಧೆಯಿಂದಲೂ, ಉತ್ಸಾಹದಿಂದಲೂ ತನ್ನ ಪಾಠಗಳನ್ನು ಕಲಿತು, ಕೆಲವು ವರುಷಗಳಲ್ಲಿ ಬಹಳ ನಿಪುಣನಾದನು. ಇಷ್ಟುಹೊತ್ತಿಗೆ ಜೇಸನ್ನಿಗೆ ಬಾಲ್ಯಾವಸ್ಥೆಯು ಕಳೆದುಹೋಗಿ ಯೌವನದಶೆಯು ಪ್ರಾರಂಭವಾಗಿದ್ದಿತು. ಸಕಾಲ ಪ್ರ ಒದಗಿತೆಂದು ಖೈರನ್ನನು ತಿಳಿದು, ಜೇಸನ್ನಿನ ತಂದೆಯು ರಾಜನಾಗಿದ್ದ ವಿಷಯವನ್ನೂ, ಆತನು ತನ್ನ ಬಲತಮ್ಮನ ದ್ರೋಹಚಿಂತನೆಯಿಂದ ರಾಜ್ಯಭ್ರಷ್ಟನಾಗಿ ಪರದೇಶದಲ್ಲಿದ್ದುದನ್ನೂ, ಜೇಸನ್ನಿಗೆ ತಿಳಿಸಿದನು. ಕೂಡಲೆ ಜೇಸನ್ನನು ತನ್ನ ತಂದೆಯ ಕಷ್ಟವನ್ನು ಪರಿಹಾರಮಾಡುವುದು ತನ್ನ ಧರ್ಮವೆಂದು ಭಾವಿಸಿ, ತನ್ನ ಗುರುವಿನ ಅನುಮತಿಯನ್ನೂ, ಆಶೀರ್ವಾದವನ್ನೂ ಪಡೆದು, ತನ್ನ ರಾಜ್ಯವನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ಐಯೊಲ್ಕಾಸನ್ನು ಕುರಿತು ಹೊರಟನು.

೭. ಹೀಗೆ ಹೊರಟಾಗ ಜೇಸನ್ನನು ಕಾಲುಗಳಲ್ಲಿ ಪಾದುಕೆಗಳನ್ನೂ, ಎರಡು ಕೈಗಳಲ್ಲಿಯೂ ಈಟಿಗಳನ್ನೂ ಧರಿಸಿ, ಚಿರತೆಯ ಚರ್ಮವೊಂದನ್ನು ಹೊದೆದುಕೊಂಡಿದ್ದನು. ಪಾದುಕೆಗಳು ಕಾಲುಗಳಲ್ಲಿ ನಿಲ್ಲುವುದಕ್ಕಾಗಿ ಅವುಗಳನ್ನು ಚಿನ್ನದ ದಾರಗಳಿಂದ ಕಟ್ಟಿಕೊಂಡಿದ್ದನು. ಈ ಅಸಾಧಾರಣವಾದ ವೇಷವನ್ನು ಧರಿಸಿ ಹೋಗುತ್ತಿದ್ದ ಬಲಿಷ್ಠನಾದ ಜೇಸನ್ನನ್ನು ಹೊಲಗದ್ದೆಗಳಲ್ಲಿ ಕೆಲಸಮಾಡುತ್ತಿದ್ದ ರೈತರು ಕಂಡು, ಅವನು ಯಾವುದೋ ಒಂದು ಸಾಹಸಕಾರ್ಯವನ್ನು ಮಾಡುವುದಕ್ಕಾಗಿ ಹೊರಟಿದ್ದನೆಂದು ತಮ್ಮತಮ್ಮಲ್ಲಿ ಪಿಸುಗುಟ್ಟಿಕೊಂಡರು.



# ಎರಡನೆಯ ಪ್ರಕರಣ.

---

## ರಾಜಧಾನಿಗೆ ಜೇಸನ್ನಿನ ಪ್ರಯಾಣ.

ಹೀಗೆ ಪ್ರಯಾಣಮಾಡಿಕೊಂಡು ಹೋಗುತ್ತಿದ್ದಾಗ ದೂರದಲ್ಲಿ ಒಂದು ಮೊರೆತವು ಕೇಳಬಂದಿತು. ಇನ್ನೂ ಸ್ವಲ್ಪ ಮುಂದೆ ಹೋಗಲು ಈ ಮೊರೆತವು ಒಂದು ಹೊಳೆಯದೆಂದು ಗೊತ್ತಾಯಿತು. ಮತ್ತೂ ಸ್ವಲ್ಪ ಮುಂದೆ ಹೋದಾಗ ಆ ಹೊಳೆಯೇ ಸಿಕ್ಕಿತು. ಆದರ ಈಚೆಯ ದಡದಲ್ಲಿ ಒಬ್ಬ ಮುದುಕಿಯು ಕೋಗಿಲೆಯ ಆಕಾರದ ಹಿಡಿಯಿದ್ದ ಒಂದು ಊರುಗೋಲನ್ನು ಊರಿಕೊಂಡು ಸುತ್ತಲೂ ತಿರುತಿರುಗಿ ನೋಡುತ್ತ ನಿಂತಿದ್ದಳು. ಅವಳ ಉಡಪೆಲ್ಲಾ ಹರಿದು ಚಿಂದಿಚಿಂದಿಯಾಗಿದ್ದಿತು; ಚರ್ಮವೆಲ್ಲಾ ಸುಕ್ಕುಸುಕ್ಕಾಗಿದ್ದಿತು; ಧ್ವನಿಯು ಕೃಶವಾಗಿಯೂ, ಬೆನ್ನು ಗೂನಾಗಿಯೂ, ಕೈಕಾಲುಗಳು ಬಡಕಲಾಗಿಯೂ ಇದ್ದುವು. ಅವಳು ಆಗಾಗ ಕೆಮ್ಮುತ್ತಲೂ ನರಲುತ್ತಲೂ, 'ಉಸ್! ಅಮ್ಮಾ!'' ಎಂದುಕೊಳ್ಳುತ್ತಿದ್ದಳು.

೯. ಅವಳನ್ನು ನೋಡಿದಕೂಡಲೆ ಜೇಸನ್ನಿನ ಮನಸ್ಸು ಕರಗಿತು. ಅವನು ಅವಳ ಬಳಿಗೆ ಹೋಗಿ "ಅಜ್ಜಮ್ಮಾ! ಈ ಹೊಳೆಯ ದಡದಲ್ಲಿ ನರಲುತ್ತ ಇದ್ದೇಕೆ ಒಬ್ಬಳೇ ನಿಂತುಕೊಂಡಿರುವೆ? ನಿನಗೆ ನನ್ನಿಂದೇನಾದರೂ ಸಹಾಯವಾಗಬೇಕೇನು?'' ಎಂದು ಕೇಳಿದನು. ಮುದುಕಿಯು "ಮಗೂ! ನಾನು ಆಚೆಯ ದಡಕ್ಕೆ ಹೋಗಬೇಕಾಗಿದೆ. ನೀನು ಎಲ್ಲಿಗಪ್ಪಾ ಹೋಗುತ್ತಿದ್ದೀಯೆ?'' ಎಂದು ಅವನನ್ನು ಕೇಳಿದಳು. ಜೇಸನ್ನನು ತನ್ನ ಚಿಕ್ಕಪ್ಪನಿಂದ ಐಯಾಲ್ಕಾಸ್ ರಾಜ್ಯವನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕೆ ಹೊರಟಿರುವುದಾಗಿಯೂ, ತಾನೂ ಹೊಳೆಯನ್ನು ದಾಟಬೇಕಾಗಿರುವುದಾಗಿಯೂ ತಿಳಿಸಿ, ಆಕೆಯನ್ನೂ ತನ್ನ ಹೆಗಲ ಮೇಲೆ ಕುಳ್ಳಿರಿಸಿಕೊಂಡು ಹೊಳೆಯಲ್ಲಿ ಕಾಲಿಟ್ಟನು.

೧೦. ಜೇಸನ್ನನು ತನ್ನ ಕೈಗಳಲ್ಲಿ ಹಿಡಿದಿದ್ದ ಎರಡು ಈಟಿಗಳ ಸಾಹಾಯ್ಯದಿಂದ ಹೊಳೆಯನ್ನು ಮೆಲ್ಲಮೆಲ್ಲಗೆ ಹಾಯಲಾರಂಭಿಸಿದನು. ಕೆಲವು ಹಜ್ಜೆಗಳನ್ನು ಇಡುವುದರೊಳಗಾಗಿ ಹೊಳೆಯ ರಭಸವು ಹೆಚ್ಚಿತು. ಮೇಲ್ಗಡೆಯಿಂದ ಸಣ್ಣಪುಟ್ಟ ಗಿಡಗಳು ಹೊಳೆಯಲ್ಲಿ ತೇಲಿಕೊಂಡು ಬರುತ್ತಿದ್ದುವು. ಇನ್ನೂ ಸ್ವಲ್ಪ ದೂರ ಹೋಗಲು ಹೊಳೆಯ ದಡದಲ್ಲಿದ್ದ ಒಂದು ದೊಡ್ಡಮರವು ಬುಡಸಹಿತವಾಗಿ ಉರುಳಿಕೊಂಡು ಬಿದ್ದು, ಹೊಳೆಯಲ್ಲಿ ತೇಲಿಕೊಂಡು ಬಂದಿತು. ಇದನ್ನು

ಜೇಸನ್ನನು ಕಂಡರೂ, ತನ್ನ ಗುರುವಿನ ಬೋಧನೆಗೆ ಅನುಸಾರವಾಗಿ ಆ ವಿಪತ್ತಿನಲ್ಲಿಯೂ ಹೆದರಲಿಲ್ಲ; ಆದರೆ ಅವನ ಹೆಗಲಮೇಲೆ ಕುಳಿತಿದ್ದ ಮುದುಕಿಯು "ಅಯ್ಯೋ! ಹೋದೆ! ಹೋದೆ!" ಎಂದು ಅರಚುತ್ತಾ ಜೇಸನ್ನಿನ ಕತ್ತನ್ನು ಮತ್ತೂ ಗಟ್ಟಿಯಾಗಿ ಹಿಡಿದುಕೊಂಡಳು. ಇದರಿಂದ ಜೇಸನ್ನಿಗೆ ಉಸಿರುಬಿಡುವುದೂ ಕಷ್ಟವಾಗುತ್ತಾಬಂದಿತು. ಆದರೂ ಅವನು "ಅಜ್ಜಮ್ಮಾ! ಹೆದರಬೇಡ! ಇಗೋ, ಆಚೆಯ ದಡವು ಹತ್ತಿರವಾಯಿತು" ಎಂದು ಧೈರ್ಯಹೇಳಿ ಅತ್ಯಂತ ಪ್ರಯಾಸದಿಂದ ಹೊಳೆಯನ್ನು ದಾಟಿಕೊಂಡು ಬಂದನು.

೧೧. ದಡದಮೇಲೆ ಕಾಲಿಟ್ಟಕೂಡಲೆ ಮುದುಕಿಯು ತಟ್ಟನೆ ಕೆಳಕ್ಕೆ ದುಮಿಕಿ ಜೇಸನ್ನಿನೊಡನೆ ಒಂದು ಮಾತನ್ನಾದರೂ ಆಡದೆ ಹೊರಟುಹೋಗುತ್ತಿದ್ದಳು. ಇದರಿಂದ ಜೇಸನ್ನಿಗೆ ವ್ಯಸನವೇನೂ ಆಗಲಿಲ್ಲ; ಅವನು ತನ್ನ ಕರ್ತವ್ಯವನ್ನು ತಾನು ಮಾಡಿದುದಕ್ಕಾಗಿ ಮನಸ್ಸಿನಲ್ಲಿಯೇ ತೃಪ್ತಿಪಟ್ಟುಕೊಂಡನು. ಸತ್ಪುರುಷರಿಗೆ ತಮ್ಮ ಕರ್ತವ್ಯಸಾಧನೆಯಿಂದಲೇ ಪರಮತೃಪ್ತಿಯಾಗುವುದಷ್ಟೆ! ಇನ್ನು ಎರಡು ಹಜ್ಜೆ ಹೋಗುವುದರೊಳಗಾಗಿ ಅವನು ಏತಕ್ಕೋ ಮುದುಕಿಯ ಕಡೆಗೆ ತಿರುಗಿ ನೋಡಿದನು. ಆದರೆ ಆಗ ಮುದುಕಿಯು ಅಲ್ಲಿರಲಿಲ್ಲ; ಅವಳಿಗೆ ಪ್ರತಿಯಾಗಿ ಒಬ್ಬ ಸುಂದರಸ್ತ್ರೀಯು ಕಂಡುಬಂದಳು. ಅವಳ ಬಳಿಯಲ್ಲಿ ಒಂದು ನವಿಲು ತನ್ನ ರೆಕ್ಕೆಗಳನ್ನು ಹರಡಿಕೊಂಡು ಕುಣಿಯುತ್ತಿದ್ದಿತು; ಆಕೆಯ ಸುತ್ತಲೂ ಹೊಂಬಣ್ಣದ ಪ್ರಭೆಯು ಕಾಣುತ್ತಿದ್ದಿತು. ಇದನ್ನೆಲ್ಲಾ ನೋಡಿ—ಆಕೆಯು ದೇವಾಧಿದೇವನಾದ ಜ್ಯೂಸಿನ ಪತ್ನಿ ಹೀರಾದೇವಿಯೇ ಎಂದೂ, ಮುದುಕಿಯ ವೇಷವನ್ನು ಹಾಕಿಕೊಂಡು ಆಕೆಯು ತನ್ನನ್ನು ಪರೀಕ್ಷಿಸಿದಳೆಂದೂ ಜೇಸನ್ನಿಗೆ ಭಾವನೆಗಳು ತಲೆದೋರಿದುವು. ಆಗ ಆ ದೇವಿಯು "ಜೇಸನ್! ನಿನ್ನ ಊಹೆಯು ಸರಿ; ನಾನು ಹೀರಾದೇವಿಯೇ ಅಹುದು. ನೀನು ನನಗೆ ಮಾಡಿದ ಉಪಕಾರಕ್ಕೆ ಪ್ರತಿಯಾಗಿ ನಿನ್ನ ಕಷ್ಟಕಾಲದಲ್ಲಿ ನಿನಗೆ ಸಹಾಯಮಾಡುವೆನು" ಎಂದು ಹೇಳಿ ತಟ್ಟನೆ ಮಾಯವಾದಳು.

೧೨. ದೇವಿಯ ಈ ವರಕ್ಕಾಗಿ ಜೇಸನ್ನನು ಆಕೆಯನ್ನು ಕೃತಜ್ಞತೆಯಿಂದ ಮನಸ್ಸಿನಲ್ಲಿಯೇ ಸ್ತುತಿಸುತ್ತ ಮುಂದೆ ಮುಂದೆ ಹೊರಟನು. ಸ್ವಲ್ಪ ಹೊತ್ತಿನಲ್ಲಿಯೇ ಐಯಾಲ್ಕಾಸ್ ಪಟ್ಟಣದ ಗೋಪುರಗಳು ಕಾಣಲಾರಂಭಿಸಿದುವು. ಆಗ ಜೇಸನ್ನನು ತನ್ನ ಬಾಲ್ಯದ ಕೆಲವು ವಿಷಯಗಳನ್ನೂ, ಕೆಲಕೆಲವು ಸ್ಥಳಗಳನ್ನೂ ನೆನೆದುಕೊಂಡು ಹಿಗ್ಗುತ್ತಿದ್ದನು. ಇನ್ನು ಕೊಂಚ ಹೊತ್ತಿನೊಳ

ಗಾಗಿ, ಆ ರಾಜಧಾನಿಯ ಪ್ರಜೆಗಳೆಲ್ಲರೂ ಹಬ್ಬದ ಉಡಿಗೆತೊಡಿಗೆಗಳನ್ನು ಧರಿಸಿ ಸಮುದ್ರತೀರದಲ್ಲಿದ್ದ ಒಂದಾನೊಂದು ಸ್ಥಳಕ್ಕೆ ಹೋಗುತ್ತಿದ್ದುದು ಕಂಡುಬಂದಿತು. ಜೇಸನ್ನನೂ ಉದ್ದೇಶವಿಲ್ಲದೆಯೇ ಅತ್ತಕಡೆ ಹೊರಟನು.

# ಮೂರನೆಯ ಪ್ರಕರಣ.

## ತಂದೆಮಕ್ಕಳ ಭೇಟಿ.

ಪುರಜನರು ಜೇಸನ್ನನ್ನು ಕಂಡಕೂಡಲೆ, "ಅಗೋ! ಅಗೋ! ಒಂಟಿ ಕೆರದವನು!" ಎಂದು ಹೇಳಿಕೊಳ್ಳುತ್ತ, ಒಂದು ಸಲ ಜೇಸನ್ನಿನ ಪಾದವನ್ನೂ, ಮತ್ತೊಂದುಸಲ ತಮ್ಮ ಸಂಗಡಿಗರ ಮುಖಗಳನ್ನೂ ನೋಡುತ್ತ, ಮೆಲ್ಲಗೆ ತಮ್ಮ ತಮ್ಮಲ್ಲಿ ಮಾತನಾಡಿಕೊಳ್ಳುತ್ತಿದ್ದರು. ಜನರು ತನ್ನನ್ನು ನೋಡಿ ಅದೇಕೆ ಪಿಸುಗುಟ್ಟಿಕೊಳ್ಳುತ್ತಿದ್ದರೆಂಬುದು ಜೇಸನ್ನಿಗೆ ತಿಳಿಯದು. ಅವನು ಹೊಳೆಯನ್ನು ದಾಟುತ್ತಿದ್ದಾಗ ಪ್ರವಾಹದ ರಭಸದಿಂದ ಅವನ ಒಂದು ಪಾದುಕೆಯು ಕಳಚಿ ಬಿದ್ದು ಹೋಗಿದ್ದಿತು. ಇನ್ನು ತನ್ನ ರಾಜ್ಯವು ತನ್ನ ವಶವಾಗುವುದಲ್ಲಾ ಎಂಬ ಸಂತೋಷದಲ್ಲಿ ಜೇಸನ್ನನು ಅದನ್ನು ಗಮನಿಸಿಯೇ ಇರಲಿಲ್ಲ. ಆದರೆ, ಭವಿಷ್ಯವನ್ನು ಹೇಳುತ್ತಿದ್ದ ವಿಲಕ್ಷಣವಾದ ಒಂದು ಮರವು ಪೀಲಿಯಾಸನ್ನು ಕುರಿತು "ಒಂಟಿ ಹಾವುಗೆಯವನಿಂದ ರಾಜ್ಯಚ್ಯುತನಾಗುವೆ" ಎಂದು ಹೇಳಿದ್ದಿತು. ಒಂಟಿಕೆರವನ್ನು ಮೆಟ್ಟಿದ್ದ ಜೇಸನ್ನನ್ನು ಪ್ರಜೆಗಳು ಕಂಡು ಆಶ್ಚರ್ಯಪಡುತ್ತಿದ್ದುದು ಈ ಭವಿಷ್ಯತ್ಸೂಚನೆಯ ದೆಸೆಯಿಂದಲೇ.

೧೪. ಜೇಸನ್ನನು ಮತ್ತೆ ಸ್ವಲ್ಪದೂರ ಹೋಗುವುದರೊಳಗಾಗಿ ಜನರ ಸಂದಣಿಯು ಹೆಚ್ಚಲು, ಅವನು ತನ್ನ ಮನಸ್ಸಿಗೆ ಬಂದಕಡೆ ಹೋಗಲಾರದಂತಾಯಿತು. ಆದುದರಿಂದ ಜೇಸನ್ನನು ಕಷ್ಟಪಟ್ಟುಕೊಂಡು ತನಗೆ ದಾರಿ ಸಿಕ್ಕಿದ ಕಡೆ ಮುಂದೆಮುಂದೆ ಹೊರಟನು. ಇನ್ನು ಸ್ವಲ್ಪದೂರ ಹೋಗುವುದರೊಳಗಾಗಿ, ಒಂದು ಯಜ್ಞವೇದಿಕೆಯಿಂದ ಹೋಮಧೂಮವು ಆಕಾಶದಕಡೆಗೆ ಏಳುತ್ತಿದ್ದುದು ಕಂಡುಬಂದಿತು. ತನ್ನ ಪ್ರಯತ್ನವಿಲ್ಲದೆಯೇ ಜೇಸನ್ನನು ಅತ್ತಕಡೆಗೆ ಪ್ರಯಾಣ

ಮಾಡಿ ಕಡೆಗೆ ಯಜ್ಞವೇದಿಕೆಯ ಬಳಿಗೆ ಬಂದು, ಅಲ್ಲಿ ಒಂದು ಪಶುವನ್ನು ದೇವರಿಗೆ ಯಜ್ಞಮಾಡುತ್ತಿದ್ದ ಪೀಲಿಯಾಸಿನ ಇದಿರಿನಲ್ಲಿ ನಿಂತನು. ಹೀಗೆ ಅಕಸ್ಮಾತ್ತಾಗಿ ಕಾಣಿಸಿಕೊಂಡ ಆ ಒಂಟಿಕೆರದವನನ್ನು ಕಂಡಕೂಡಲೆ, ಪೀಲಿಯಾಸಿಗೆ ಭಯವೂ ಕೋಪವೂ ಏಕಕಾಲದಲ್ಲಿ ಉಂಟಾದುವು.

೧೫. ತನ್ನ ಬಳಿಗೆ ಒಂಟಿಕೆರದವರು ಯಾರೂ ಬರಲೇಕೂಡದೆಂದು ಪೀಲಿಯಾಸನು ಕಟ್ಟಪ್ಪಣೆಯನ್ನು ಮಾಡಿದ್ದನು. ಅದಕ್ಕಾಗಿ ಕೆರದ ಒಂದು ಇಲಾಖೆಯನ್ನೇ ಏರ್ಪಡಿಸಿ ತನ್ನ ಆಸ್ಥಾನಕ್ಕೆ ಬರುತ್ತಿದ್ದವರ ಪಾದಗಳಲ್ಲಿ ಕೆರಗಳು ಸರಿಯಾಗಿದ್ದುವೋ ಇಲ್ಲವೋ ಎಂಬುದನ್ನು ನೋಡಿಕೊಳ್ಳುವುದಕ್ಕಾಗಿ ಒಬ್ಬ ಅಧಿಕಾರಿಯನ್ನು ನೇಮಿಸಿದ್ದನು. ಯಾವ ಆಸ್ಥಾನಿಕನ ಮೆಟ್ಟುಗಳಾದರೂ ಸ್ವಲ್ಪ ಸವೆದುಹೋದುವೆಂದರೆ ಅವನಿಗೆ ಆ ಅಧಿಕಾರಿಯು ಹೊಸಕೆರದ ಜೊತೆಯನ್ನು ಕೂಡಲೆ ಒದಗಿಸಿಕೊಡುತ್ತಿದ್ದನು. ಇಷ್ಟೆಲ್ಲ ಏರ್ಪಾಡುಗಳಿದ್ದರೂ ತನ್ನ ಬಳಿಗೆ ಒಂಟಿಹಾವುಗೆಯನ್ನು ಧರಿಸಿದ್ದ ಜೇಸನ್ನನು ಬಂದುದೇ ಪೀಲಿಯಾಸಿನ ಕೋಪಭಯಗಳಿಗೆ ಕಾರಣವು.

೧೬. ಪೀಲಿಯಾಸನು ಕುತಂತ್ರಿಯೆಂದು ಹಿಂದೆಯೇ ಹೇಳಿದೆಯಲ್ಲವೆ? ಜೇಸನ್ನನ್ನು ಕಂಡಕೂಡಲೆ ಪೀಲಿಯಾಸನು ತನ್ನ ಭಯಕೋಪಗಳನ್ನು ಮರೆಯಿಸಿಕೊಂಡು, ನಸುನಗುತ್ತ "ಯಾರಪ್ಪಾ, ನೀನು?" ಎಂದು ಅವನನ್ನು ಕೇಳಿದನು. ಎಂತಹ ಕಷ್ಟಗಳು ಒದಗಿದರೂ ಸುಳ್ಳನ್ನು ಹೇಳಬಾರದೆಂದು ಖೈರನ್ನಿಂದ ಚೆನ್ನಾಗಿ ಕಲಿತುಕೊಂಡಿದ್ದ ಜೇಸನ್ನನು, ಪೀಲಿಯಾಸನ್ನು ಕುರಿತು "ನಮ್ಮ ತಂದೆಯ ಹೆಸರು ಏಸನ್; ನಾನು ಜೇಸನ್. ಈ ಐಯಾಲ್ಕಾಸ್ ರಾಜ್ಯಕ್ಕೆ ಈಗ ದೊರೆಯಾಗಿರುವ ಪೀಲಿಯಾಸಿನಂತೆ ನೀನು ತೋರುತ್ತೀಯೆ. ಹಾಗಿದ್ದರೆ ನಿನ್ನಿಂದ ನಮ್ಮ ತಂದೆಯ ರಾಜ್ಯವನ್ನು ಬಿಡಿಸಿಕೊಳ್ಳಬೇಕೆಂದು ನಾನು ಬಂದಿದ್ದೇನೆ" ಎಂದು ನಿರ್ಭಯವಾಗಿ ಹೇಳಿದನು. ಈ ಮಾತುಗಳನ್ನು ಕೇಳಿದಕೂಡಲೆ ಪೀಲಿಯಾಸಿನ ಮನಸ್ಸಿನಲ್ಲಿ ಹೇಗೆ ಆಗಿರಬಹುದೋ ಅದನ್ನು ವಾಚಕರೇ ಊಹಿಸಿಕೊಳ್ಳಬಹುದು. ಆದರೂ ಪೀಲಿಯಾಸನು ತನ್ನ ಮನಸ್ಸಿನಲ್ಲಿ ತಳಮಳಸಿ ಕುದಿಯುತ್ತಿದ್ದ ಕೋಪತಾಪಗಳನ್ನು ಸ್ವಲ್ಪವಾದರೂ ತೋರ್ಪಡಿಸದೆ "ಜೇಸನ್! ಈ ಹೊತ್ತು ಇಷ್ಟು ಸುದಿನವೆಂದು ನಾನು ತಿಳಿದಿರಲಿಲ್ಲ. ಮಗೂ! ನಿನ್ನನ್ನು ನೋಡದೆ ಇಷ್ಟು ದಿವಸವೂ ನಾನು ಬಹಳವಾಗಿ ಕೊರಗುತ್ತಲಿದ್ದೆನು. ನೀನು ಚಿಕ್ಕಂದಿನಲ್ಲಿಯೇ ಸತ್ತುಹೋದೆಯೆಂದು ಎಷ್ಟೋ ಶೋಕಿಸುತ್ತಿದ್ದೆನು. ನಮ್ಮ

ಪುಣ್ಯದಿಂದ ನೀನು ಜೀವಸಹಿತನಾಗಿರುವೆ. ಬಾರಪ್ಪಾ! ಬಹಳದೂರ ಪ್ರಯಾಣ ಮಾಡಿರುವುದರಿಂದ ನೀನು ದಣಿದುಹೋಗಿದ್ದೀಯೆ. ನಡೆ ಅರಮನೆಗೆ ಹೋಗುವ" ಎಂದು ಅವನನ್ನು ತಬ್ಬಿಕೊಂಡು ತನಗೆ ಬಹಳ ಸಂತೋಷವುಂಟಾಗಿದ್ದಂತೆ ನಟಿಸಿದನು. ಬಳಿಕ ತಾನು ಮಾಡುತ್ತಿದ್ದ ಯಜ್ಞವನ್ನು ಬೇಗಬೇಗನೆ ಮುಗಿಸಿಬಿಟ್ಟು ಜೇಸನ್ನನ್ನೂ ತನ್ನ ರಥದಲ್ಲಿಯೇ ಕುಳ್ಳಿರಿಸಿಕೊಂಡು ಅರಮನೆಗೆ ಹೋದನು.

೧೭. ಅನಿರೀಕ್ಷಿತವಾಗಿ ಬಂದಿದ್ದ ಜೇಸನ್ನನ್ನು ಗೌರವಿಸಬೇಕೆಂದು ಪೀಲಿಯಾಸನು ಅರಮನೆಯಲ್ಲಿ ಒಂದು ದೊಡ್ಡಔತನವನ್ನು ಏರ್ಪಡಿಸಿದನು. ಅದಕ್ಕೆ ರಾಜಧಾನಿಯಲ್ಲಿದ್ದ ದೊಡ್ಡಮನುಷ್ಯರೆಲ್ಲರೂ ಬಂದಿದ್ದರು. ಅತಿಥಿಗಳೆಲ್ಲರೂ ಸೊಗಸಾದ ಉಡಪುಗಳನ್ನು ಧರಿಸಿಕೊಂಡು ಕುಳಿತಿದ್ದರು. ಮತ್ತೊಂದು ಕಡೆ ತಮ್ಮ ತಮ್ಮ ಕವನಗಳನ್ನು ರಮ್ಯವಾಗಿ ಹಾಡುತ್ತ ಕವಿಗಳು ಸದಸ್ಯರುಗಳಿಗೆ ಬಹಳ ಸಂತೋಷವನ್ನುಂಟುಮಾಡುತ್ತಿದ್ದರು. ಬಗೆಬಗೆಯ ಭಕ್ಷ್ಯಗಳನ್ನೂ ಪಾನೀಯಗಳನ್ನೂ ಪರಿಚಾರಕರು ತಂದು ಅತಿಥಿಗಳಿಗೆ ಬಡಿಸುತ್ತಿದ್ದರು. ಎತ್ತಕಡೆ ನೋಡಿದರೂ ಆ ಸಭಾಮಂದಿರದಲ್ಲಿ ಸಂತೋಷವು ಉಕ್ಕುತ್ತಿದ್ದಂತೆ ತೋರುತ್ತಿದ್ದಿತು.

೧೮. ಪೀಲಿಯಾಸನು ಮುಖ್ಯಾತಿಥಿಯಾದ ಜೇಸನ್ನನ್ನೂ, ತನ್ನ ಪುತ್ರ ಪುತ್ರಿಯರನ್ನೂ ತನ್ನ ಬಳಿಯಲ್ಲಿಯೇ ಕುಳ್ಳಿರಿಸಿಕೊಂಡು ಸರಸವಾಗಿ ಸಂಭಾಷಿಸುತ್ತಿದ್ದನು. ಜೇಸನ್ನನು ತನ್ನ ಗುರುವಿನ ಮಹಿಮೆಯನ್ನೂ ಆತನಿಂದ ತಾನು ಕಲಿತಿದ್ದ ಅನೇಕ ವಿಷಯಗಳನ್ನೂ ತನ್ನ ಚಿಕ್ಕಪ್ಪನಿಗೆ ಮುಚ್ಚುಮರೆಯಿಲ್ಲದೆ ತಿಳಿಸುತ್ತಿದ್ದನು. ಅವೆಲ್ಲವನ್ನೂ ಕೇಳಿ ಅತ್ಯಂತವಾಗಿ ಸಂತೋಷಪಟ್ಟಂತೆ ನಟಿಸುತ್ತ ಪೀಲಿಯಾಸನು ಜೇಸನ್ನನ್ನು ಕುರಿತು "ಅದೆಲ್ಲಾ ಸರಿಯೆ! ನಿನಗೆ ಲೋಕವ್ಯವಹಾರಜ್ಞಾನವು ಎಷ್ಟುಮಟ್ಟಿಗಿದೆಯೋ ಒಂದು ಪ್ರಶ್ನೆಯನ್ನು ಕೇಳಿ ಪರೀಕ್ಷಿಸುವೆನು. ಎಲ್ಲಿ ನೋಡುವ! ಉತ್ತರಕೊಡು" ಎಂದು ಹೇಳಿದನು. ಜೇಸನ್ನಾದರೋ ಪೀಲಿಯಾಸಿನ ಉದ್ದೇಶವನ್ನು ಅರಿತುಕೊಳ್ಳಲಾರದೆ "ಅದಕ್ಕೇನು? ನನಗೆ ತಿಳಿದಮಟ್ಟಿಗೆ ಉತ್ತರಹೇಳುವೆನು" ಎಂದನು. ಆಗ ಪೀಲಿಯಾಸನು "ಮಗೂ! ನಿನ್ನ ಸರ್ವಸ್ವವನ್ನೂ ಅಪಹರಿಸಿ ನಿನ್ನನ್ನು ಕೊಂದುಬಿಡಬೇಕೆಂದಿರುವ ಒಬ್ಬ ಶತ್ರುವು ನಿನಗೆ ಒದಗಿರುವನೆಂದು ಭಾವಿಸಿಕೊ; ಅಂತಹವನನ್ನು ಸುಲಭವಾಗಿಯೂ ಲೋಕಾಪವಾದವಿಲ್ಲದಂತೆಯೂ ನಿಗ್ರಹಿಸಬೇಕಾದರೆ ನೀನು ಏನುಮಾಡುವೆ?" ಎಂದು ಕೇಳಿದನು. ಜೇಸನ್ನನು ಸ್ವಲ್ಪ ಹೊತ್ತು

ಆಲೋಚಿಸುತ್ತಿದ್ದು ' ತನ್ನ ಚಿಕ್ಕಪ್ಪನನ್ನು ನೋಡುತ್ತ "ಇಂತಹ ಸಂದರ್ಭದಲ್ಲಿ ನನ್ನ ಶತ್ರುವಿಗೆ ಯಾವುದಾದರೂ ಒಂದು ಅಸಾಧ್ಯವಾದ ಕೆಲಸವನ್ನು ಮಾಡಿ ಕೊಂಡುಬರುವಂತೆ ಒಪ್ಪಿಸಿ ಅವನನ್ನು ಕಳುಹಿಸಿ ಬಿಡುವೆನು" ಎಂದು ಉತ್ತರ ಕೊಟ್ಟನು. ಪೀಲಿಯಾಸನು ಈ ಉತ್ತರವನ್ನು ಕೇಳಿ ಬಹಳ ಸಂತೋಷಪಟ್ಟವ ನಂತೆ ತೋರ್ಪಡಿಸಿಕೊಳ್ಳುತ್ತ ಜೇಸನ್ನಿಗೆ ಮತ್ತೂ ಉಪಚಾರವನ್ನು ಮಾಡಿದನು.

೧೯. ಈ ಮಧ್ಯದಲ್ಲಿ ಕವಿಗಳು ಒಬ್ಬರಾದಮೇಲೆ ಒಬ್ಬರಂತೆ ತಮ್ಮ ತಮ್ಮ ವೀಣೆಗಳನ್ನು ನುಡಿಸುತ್ತ ಪೂರ್ವಕಾಲದ ಶೂರರು ಮಾಡಿದ್ದ ಅನೇಕ ಸಾಹಸ ಕೃತ್ಯಗಳನ್ನು ಅದ್ಭುತವಾಗಿ ವರ್ಣಿಸುತ್ತ ಇದ್ದರು. ಅವರಲ್ಲಿ ಅತ್ಯುತ್ತಮನಾದ ಕವಿಯು, ಹಿಂದೆ ಪೀಲಿಯಾಸನು ಸೂಚಿಸಿದ್ದಂತೆ ಕನಕೋರ್ಣದ ವಿಷಯವನ್ನೂ ಅದನ್ನು ತರುವುದಕ್ಕಾಗಿ ಸಾಹಸಮಾಡಿ ನಾಶವಾಗಿದ್ದ ಅನೇಕ ಮಹಾಶೂರರ ವೃತ್ತಾಂತವನ್ನೂ, ಬಹಳ ಮನೋಹರವಾಗಿ ವರ್ಣಿಸಿದನು. ಆ ಸಭಾಮಂದಿರ ದಲ್ಲಿದ್ದ ತರುಣವಯಸ್ಕರೆಲ್ಲರಿಗೂ ಆ ಕವಿಯ ವರ್ಣನೆಯನ್ನು ಕೇಳಿ ಉತ್ಸಾಹವು ಇಮ್ಮಡಿಸಿದ್ದಿತು. ತನಗೆ ತಕ್ಕ ಸಮಯವು ಒದಗಿತೆಂದು ತಿಳಿದು ಪೀಲಿಯಾಸನು ಜೇಸನ್ನನ್ನು ಕುರಿತು "ಮಗೂ! ಈ ಕವಿಯ ವರ್ಣನೆಯನ್ನು ಕೇಳಿದೆಯಾ? ಆದರೆ ಅಂತಹ ಸಾಹಸಕಾರ್ಯಗಳು ನಮ್ಮವರ ಕಾಲಕ್ಕೇ ಮುಗಿದುಹೋದುವು. ಈ ಕಾಲದ ದುರ್ಬಲರಾದ ತರುಣರ ಕೈಯಿಂದ ಇಂತಹ ಕೆಲಸಗಳು ಆಗುವುವೆ?" ಎಂದು ಮೂದಲಿಸಿದನು. ಈಗ ಜೇಸನ್ನಿಗೆ ತಾನು ಹಿಂದೆ ಹೇಳಿದ್ದ ಉತ್ತರವು ಜ್ಞಾಪಕಕ್ಕೆ ಬಂದು ತನ್ನನ್ನು ಉಪಾಯವಾಗಿ ಸಾಗಹಾಕುವುದಕ್ಕಾಗಿಯೇ ತಂತ್ರಿಯಾದ ತನ್ನ ಚಿಕ್ಕಪ್ಪನು ಅಷ್ಟೆಲ್ಲಾ ಏರ್ಪಾಡುಗಳನ್ನು ಮಾಡಿದ್ದನೆಂದು ತಟ್ಟನೆ ಅವನ ಮನಸ್ಸಿಗೆ ಹೊಳೆಯಿತು. ಆದರೆ ಮಹಾತ್ಮನಾದ ಗುರುವಿನ ಬೋಧನೆಯಿಂದ ಜೇಸನ್ನಿನಲ್ಲಿ ಉತ್ಸಾಹವೂ, ಧೈರ್ಯವೂ, ಆತ್ಮಗೌರವಬುದ್ಧಿ ಯೂ, ತಾನು ಕೊಟ್ಟಮಾತನ್ನು ಉಳಿಸಿಕೊಳ್ಳಬೇಕೆಂಬ ಜ್ಞಾನವೂ, ಚೆನ್ನಾಗಿ ವೃದ್ಧಿಯಾಗಿದ್ದುವು. ಆದುದರಿಂದ ಅವನು ಪೀಲಿಯಾಸನ್ನು ಕುರಿತು "ಚಿಕ್ಕಪ್ಪಾ! ಇದೇಕೆ ಹೀಗೆ ಹೇಳುವೆ? ಕನಕೋರ್ಣವನ್ನು ನಾನು ತೆಗೆದುಕೊಂಡು ಬರುವೆನು. ಒಂದುವೇಳೆ ಅದು ಸಿಕ್ಕದಿದ್ದರೆ ಪೂರ್ವದ ಶೂರರಹಾಗೆಯೇ ನಾನೂ ಆ ಪ್ರಯತ್ನ ದಲ್ಲಿ ಪ್ರಾಣಬಿಡುವೆನು. ಕನಕೋರ್ಣವನ್ನು ನಾನು ತಂದ ಪಕ್ಷದಲ್ಲಿ ನಮ್ಮ ತಂದೆಯ ರಾಜ್ಯವನ್ನು ಬಿಟ್ಟುಕೊಡುವೆಯಷ್ಟೆ?" ಎಂದು ಕೇಳಿದನು. ಇದಕ್ಕೆ ಉತ್ತರಕೊಡಲು ಪೀಲಿಯಾಸಿಗೆ ಸ್ವಲ್ಪವಾದರೂ ಸಂದೇಹವಿರಲಿಲ್ಲ. ಆದರೂ

ಅವನು "ಮಗೂ! ಅಸಾಧ್ಯವಾದ ಕೆಲಸಕ್ಕೆ ನಿನ್ನನ್ನು ಕಳುಹಿಸುವುದಕ್ಕೆ ನನಗೆ ಮನಸ್ಸೇ ಬಾರದು; ಆದರೆ ನೀನು ಕೀರ್ತಿಯನ್ನು ಸಂಪಾದಿಸಬೇಕೆಂದಿದ್ದರೆ ಅದಕ್ಕೆ ನಾನೇಕೆ ಅಡ್ಡಿಮಾಡಲಿ? ಹೋಗಿಬಿಟ್ಟು ಬಾರಪ್ಪಾ!" ಎಂದು ಅತಿವಿನಯದಿಂದ ಹೇಳಿ ಅವನನ್ನು ಕಳುಹಿಸಿಕೊಟ್ಟನು.



# ನಾಲ್ಕನೆಯ ಪ್ರಕರಣ.

## ಪ್ರಯಾಣಸನ್ನಾಹವೂ, ಪ್ರಯಾಣವೂ.

ಐಯೊಲ್ಕಸನ್ನು ಬಿಡುವುದಕ್ಕೆ ಮುಂಚೆ ಜೇಸನ್ನನು, ಹಿಂದೆ ಹೇಳಿದ ವಿಲಕ್ಷಣವಾದ ವೃಕ್ಷದ ಬಳಿಗೆ ಬಂದನು. ಆ ಮರವು ಅನೇಕ ಶತಮಾನಗಳಿಂದ ಬೆಳೆದುಕೊಂಡಿದ್ದುದರಿಂದ ಅದರ ದಪ್ಪ ಕೊಂಬೆಗಳು ದಿಕ್ಕು ದಿಕ್ಕಿಗೂ ಹರಡಿ ಕೊಂಡಿದ್ದುವು. ಅದರ ಎಲೆಗಳು ದಟ್ಟವಾಗಿದ್ದಕಾರಣ ಸೂರ್ಯಚಂದ್ರರ ಕಿರಣಗಳು ಗಿಡದ ನೆರಳಿನಲ್ಲಿ ಬೀಳುತ್ತಲೇ ಇರಲಿಲ್ಲ. ಜೇಸನ್ನನು ಆ ಗಿಡದಕೆಳಕ್ಕೆ ಹೋಗಿ ತನ್ನ ಅಭಿಮಾನದೇವತೆಯಾದ ಹೀರಾದೇವಿಯನ್ನು ಮನಸ್ಸಿನಲ್ಲಿಯೇ ಧ್ಯಾನಮಾಡುತ್ತ—"ಕನಕೋರ್ಣವನ್ನು ಸಂಪಾದಿಸುವುದಕ್ಕೆ ನಾನು ಏನುಮಾಡಬೇಕು?" ಎಂದು ಭಯಭಕ್ತಿಗಳಿಂದ ಕೇಳಿದನು. ಆ ಸಮಯದಲ್ಲಿ ಒಂದು ಬಿರುಗಾಳಿಯು ಎದ್ದಿತು. ಸ್ವಲ್ಪಹೊತ್ತಿನವರೆಗೂ ಆ ಮರದ ಎಲೆಗಳು ರಭಸದಿಂದ ಅತ್ತಿತ್ತ ಕದಲುತ್ತಾ ಶಬ್ದಮಾಡಿದವು. ಇನ್ನು ಸ್ವಲ್ಪ ಹೊತ್ತಾದಮೇಲೆ ಎಲೆಗಳ ಅಲುಗಾಟವು ಸ್ವಲ್ಪ ಸ್ವಲ್ಪವಾಗಿ ನಿಂತು ಎಲ್ಲೆಲ್ಲಿಯೂ ನಿಶ್ಶಬ್ದವಾಯಿತು. ಆಗ "ಐವತ್ತುಮಂದಿ ನಾವಿಕರು ಪ್ರಯಾಣಮಾಡುವಂತಹ ದೋಣಿಯೊಂದನ್ನು ಆರ್ಗಸ್ಸಿನಿಂದ ಕಟ್ಟಿಸು" ಎಂಬ ಮಾತುಗಳು ಅಸ್ಪಷ್ಟವಾಗಿ ಕೇಳಬಂದುವು. ವೃಕ್ಷವು ಮತ್ತೇನನ್ನಾದರೂ ಹೇಳಬಹುದೆಂದು ಜೇಸನ್ನನು ಬಹಳ ಕುತೂಹಲದಿಂದ ಇನ್ನೂ ಸ್ವಲ್ಪಹೊತ್ತು ಕಾದಿದ್ದನು. ಆದರೆ ಮತ್ತೆ ಯಾವ ಧ್ವನಿಯೂ ಕೇಳಿಸಲಿಲ್ಲ. ಆದುದರಿಂದ ಮರವು ಹೇಳಿದ್ದ ಆರ್ಗಸ್ಸನು ಎಲ್ಲಿರುವನೋ ಎಂದು ಮನಸ್ಸಿನಲ್ಲಿಯೇ ಯೋಚಿಸುತ್ತ ಮುಂದೆ ಹೊರಟನು.

೨೧. ಹೀರಾದೇವಿಯು ಕರುಣೆಯು ಜೇಸನ್ನಿನ ಮೇಲೆ ಚೆನ್ನಾಗಿ ನೆಲೆಸಿದ್ದುದರಿಂದ ಸ್ವಲ್ಪಹೊತ್ತಿನಲ್ಲಿಯೇ ಒಬ್ಬ ಬಡಗಿಯು ಪಟ್ಟಡಿಯು ಅವನಿಗೆ ಸಿಕ್ಕಿತು. ಬಡಗಿಯ ಹೆಸರನ್ನು ವಿಚಾರಿಸಲು ಅವನೇ ಆರ್ಗಸ್ ಎಂದು ತಿಳಿಯಬಂದಿತು. ಅವನಿಗೆ ಜೇಸನ್ನನು ತನ್ನ ಉದ್ದೇಶವನ್ನು ತಿಳಿಸುತ್ತಲೇ ಆರ್ಗಸ್ಸನು ಸಂತೋಷದಿಂದ ದೋಣಿಯನ್ನು ಕಟ್ಟಿಕೊಡಲು ಒಪ್ಪಿದುದುಮಾತ್ರವಲ್ಲದೆ, ಐವತ್ತುಜನ ನಾವಿಕರಲ್ಲಿ ತಾನೂ ಒಬ್ಬನಾಗಿರುವುದಕ್ಕೆ ಸಮ್ಮತಿಸಿದನು. ಆ ಕಾಲಕ್ಕೆ ಮುಂಚೆ ಐವತ್ತುಜನರು ಕುಳಿತು ನಡೆಯಿಸಬಹುದಾದ ದೊಡ್ಡದೋಣಿಯನ್ನು ಎಂದೂ ಗ್ರೀಕರು ಉಪಯೋಗಿಸಿಯೇ ಇರಲಿಲ್ಲವೆಂದು ತೋರುವುದು. ಆದರೂ ದೈವೇಚ್ಛೆಯಿಂದ, ಅಷ್ಟು ದೊಡ್ಡ ದೋಣಿಗೆ ಬೇಕಾಗಿದ್ದ ಒಣಮರವು ಐಯಾಲ್ಕಾಸಿನಲ್ಲಿಯೇ ಸುಲಭವಾಗಿ ಸಿಕ್ಕಿತು. ಅದರಿಂದ ಆರ್ಗಸ್ಸನು ದೋಣಿಯನ್ನು ಮಾಡಲು ಬಹಳಕಾಲ ಹಿಡಿಯಲಿಲ್ಲ. ಅವನು ತನ್ನ ಆಯುಧಗಳನ್ನು ಕೈಯಲ್ಲಿ ಹಿಡಿದಮಾತ್ರಕ್ಕೇ ಅವು ತಾವಾಗಿಯೇ ಚಲಿಸಿದುದರಿಂದ ಒಂದು ಅಂದವಾದ ದೋಣಿಯು ಅತ್ಯಲ್ಪಕಾಲದಲ್ಲಿ ಸಿದ್ಧವಾಯಿತು.

೨೨. ಮುಂದಕ್ಕೆ ಏನುಮಾಡಬೇಕೆಂಬುದು ಜೇಸನ್ನಿಗೆ ತೋರಲಿಲ್ಲ. ಆದುದರಿಂದ ಅವನು ಆ ಆಶ್ಚರ್ಯಕರವಾದ ವೃಕ್ಷವಿದ್ದ ಡೊಡೋನಾ ಎಂಬ ಸ್ಥಳಕ್ಕೆ ಹೋಗಿ "ಮುಂದಕ್ಕೆ ಏನು ಮಾಡಬೇಕು ?" ಎಂದು ಅತ್ಯಂತ ನಮ್ರತೆಯಿಂದ ಕೇಳಿಕೊಂಡನು. "ಗ್ರೀಸಿನಲ್ಲಿರುವ ಸಾಹಸಿಗಳಾದ ವೀರರನ್ನು ಕೇಳಿಕೊಂಡರೆ ಅವರು ನಿನ್ನ ಸಹಾಯಕ್ಕೆ ಬರುವರು" ಎಂಬ ಮಾತುಗಳು ಹಿಂದಿನಂತೆಯೇ ಕೇಳಿಸಿದುವು. ಇದಕ್ಕೆ ಅನುಸಾರವಾಗಿ ಜೇಸನ್ನನು ಗ್ರೀಸಿನ ಅನೇಕ ಪ್ರದೇಶಗಳಿಗೆ ಚಾರರನ್ನು ಕಳುಹಿಸಿಕೊಟ್ಟನು. ಈ ಸುದ್ದಿಯನ್ನು ಕೇಳಿದ ಕೂಡಲೆ ನಲವತ್ತೇಳುಮಂದಿ ಮಹಾಶೂರರು ನಾನು ತಾನೆಂದು ಐಯಾಲ್ಕಾಸಿಗೆ ಬಂದು ಸೇರಿದರು. ಪೀಲಿಯಾಸನು ಪ್ರತಿಬಂಧಿಸುತ್ತಿದ್ದರೂ ಅವನ ಮಗನಾದ ಅಕಾಸ್ಟಸ್ ಎಂಬವನೂ ಒಬ್ಬ ನಾವಿಕನಾಗಿರಲು ಗೋಪ್ಯವಾಗಿ ಒಪ್ಪಿದನು. ಹೀಗೆ ಐವತ್ತು ಮಂದಿ ನಾವಿಕರೂ ಸಿದ್ಧವಾದ ಕೂಡಲೆ ಅವರು ತಮ್ಮ ತಮ್ಮ ಅಭಿಮಾನದೇವತೆಗಳಿಗೆ ಪ್ರಾರ್ಥನೆಯನ್ನು ಮಾಡಿ ದೋಣಿಯನ್ನು ಸಮುದ್ರದೊಳಕ್ಕೆ ಬಿಡಬೇಕೆಂದು ತಮ್ಮ ಶಕ್ತಿಸಾಮರ್ಥ್ಯಗಳನ್ನೆಲ್ಲ ಉಪಯೋಗಿಸಿದರು. ಆದರೂ ಅದು ಒಂದು ಕೂದಲಿನ ಗೆರೆಯಷ್ಟಾದರೂ ಕದಲಲಿಲ್ಲ. ಆಗ ಬುದ್ಧಿವಂತನಾದ ಜೇಸನ್ನನು ತಾನು ಮತ್ತೆ ಯಾವುದೋ ಒಂದು ಅಗತ್ಯವಾದ ಕಾರ್ಯವನ್ನು ಮಾಡಬೇಕಾಗಿರು

ವುದೆಂದು ಭಾವಿಸಿ ಪ್ರಶ್ನೆಹೇಳುತ್ತಿದ್ದ ವೃಕ್ಷದಬಳಿಗೆ ಮರಳಿ ಹೋಗಿ ತಾನು ಮತ್ತೇನನ್ನು ಮಾಡಬೇಕೋ ಅದನ್ನು ಅಪ್ಪಣೆಕೊಡಿಸಬೇಕೆಂದು ವಿನಯದಿಂದ ಪ್ರಾರ್ಥಿಸಿಕೊಂಡನು. ಆಗ ಆ ಮರದ ಒಂದು ಕೊಂಬೆಯು "ನನ್ನನ್ನು ಕಡಿದು ಮರದಿಂದ ಒಂದು ಬೊಂಬೆಯನ್ನು ಮಾಡಿಸಿ ದೋಣಿಯಲ್ಲಿಟ್ಟುಕೊ ; ಅದೇ ನಿನ್ನ ಮುಂದಣ ಕರ್ತವ್ಯಗಳನ್ನೆಲ್ಲ ತಿಳಿಸುವುದು" ಎಂದು ಹೇಳಿದಂತೆ ಕೇಳಬಂದಿತು. ಅದೇ ಮೇರೆಗೆ ಜೇಸನ್ನನು ಆ ಕೊಂಬೆಯನ್ನು ಕಡಿದು ಆರ್ಗಸ್ಸಿಗೆ ತಂದುಕೊಡಲು ಅವನು ಅದರಿಂದ ಒಂದು ಸುಂದರವಾದ ಬೊಂಬೆಯನ್ನು ಹೀರಾದೇವಿಯ ಪ್ರೇರಣೆಯಂತೆ ಸಿದ್ಧಪಡಿಸಿದನು.

೨೩. ತರುವಾಯ ಜೇಸನ್ನನು ಆ ಬೊಂಬೆಯನ್ನು ಪ್ರಶ್ನಿಸಲು 'ದೋಣಿಯಲ್ಲಿ ನೀವೆಲ್ಲರೂ ಕುಳಿತುಕೊಂಡಮೇಲೆ ಆರ್ಫಿಯಸ್ಸನು ವೀಣೆಯನ್ನು ನುಡಿಸಲಿ" ಎಂದು ಉತ್ತರಕೊಟ್ಟಿತು. ಈ ಸಮಯದಲ್ಲಿ ಪೀಲಿಯಾಸನು ಒಂದು ಎತ್ತರವಾದ ತಿಟ್ಟಿನ ಮೇಲೆ ಕುಳಿತುಕೊಂಡು ದೋಣಿಯನ್ನೇ ದುರದುರನೆ ನೋಡುತ್ತ "ಅದು ಹಾಗೆಯೇ ನಾಶವಾಗಿ ಹೋಗಲಿ!" ಎಂದು ಮನಸ್ಸಿನಲ್ಲಿ ಎಂದುಕೊಳ್ಳುತ್ತಿದ್ದನು. ಅವನ ಪ್ರಜೆಗಳೆಲ್ಲರೂ ಸಮುದ್ರತೀರಕ್ಕೆ ತಂಡತಂಡವಾಗಿ ಬಂದು ಮುಂದೆ ಏನಾಗುವುದೋ ಎಂದು ಅತ್ಯಂತಕುತೂಹಲದಿಂದ ನೋಡುತ್ತಿದ್ದರು. ಆರ್ಫಿಯಸ್ಸನು ತನ್ನ ಬೆರಳುಗಳಿಂದ ವೀಣೆಯನ್ನು ಒಂದುಸಲ ಮೀಟಿದ ಕೂಡಲೆ ವೀಣಾಧ್ವನಿಯನ್ನು ಕೇಳಿದ ಜನರೆಲ್ಲರೂ ಕುಣಿಯಲಾರಂಭಿಸಿದರು. ಆ ದೋಣಿಯು ತಾನಾಗಿಯೇ ಚಲಿಸಿ ಸಮುದ್ರವನ್ನು ಪ್ರವೇಶಿಸಿತು. ಆ ಸಮಯದಲ್ಲಿ ಪ್ರಜೆಗಳೆಲ್ಲರೂ ಉತ್ಸಾಹದಿಂದ ಆರ್ಭಟಿಸುತ್ತ "ಹೋಗಿಬನ್ನಿ, ನಿಮಗೆ ಜಯವಾಗಲಿ" ಎಂದು ಗಟ್ಟಿಯಾಗಿ ಹೇಳಿ ಹರಸಿದರು. ಪೀಲಿಯಾಸನು ಮಾತ್ರ ತನಗೆ ಬಂದಿದ್ದ ಅಪಮೃತ್ಯು ತೊಲಗಿತಲ್ಲಾ ಎಂದು ಭಾವಿಸಿಕೊಳ್ಳುತ್ತ, ಜೇಸನ್ನನೂ, ಅವನ ಸಂಗಡಿಗರೂ ಹಿಂದಿರುಗದಂತೆ ಮಾಡಬೇಕೆಂದು ತನಗೆ ಜ್ಞಾಪಕಕ್ಕೆ ಬಂದ ದೇವತೆಗಳಿಗೆಲ್ಲಾ ಕೈಮುಗಿದು ಬಗೆಬಗೆಯ ಹರಕೆಗಳನ್ನು ಕಟ್ಟಿಕೊಳ್ಳುತ್ತಿದ್ದನು.

೨೪. ದೋಣಿಯ ನಾವಿಕರಲ್ಲಿ ಲಿಂಸಿಯಸ್ ಎಂಬೊಬ್ಬನಿದ್ದನು. ಅವನ ದೃಷ್ಟಿಪಾಟವವು ಅದ್ಭುತವಾಗಿದ್ದಿತು. ಸಮುದ್ರದ ತಳದಲ್ಲಿ ಎಷ್ಟೋ ಕಾಲಕ್ಕೆ ಹಿಂದೆ ಮುಳುಗಿಹೋಗಿದ್ದ ನಿಧಿಗಳನ್ನು ನೋಡಿದಾಗಲೆಲ್ಲಾ "ಇಗೋ ಇಲ್ಲಿ ಚಿನ್ನದನಾಣ್ಯಗಳ ಪೆಟ್ಟಿಗೆಯೊಂದು ಬಿದ್ದುಹೋಗಿರುವುದು! ಇಗೊ! ಇಲ್ಲಿ,

ಮುತ್ತಿನಹಾರವು, ಅಗೊ! ಅಲ್ಲಿ, ವಜ್ರಗಳ ಕಂಠಿಕೆ!" ಎಂದು ಆಗಾಗ ತನ್ನ ಸಂಗಡಿಗರೊಡನೆ ಹೇಳುತ್ತಿದ್ದನು. ಗಾಳಿಯು ಅನುಕೂಲವಾಗಿ ಬೀಸುತ್ತಿದ್ದಿತು; ನಾವಿಕರು ಉತ್ಸಾಹದಿಂದ ದೋಣಿಯನ್ನು ನಡೆಯಿಸುತ್ತ ಅನೇಕ ಮೈಲುಗಳ ದೂರ ಕೆಲವು ಗಂಟೆಗಳಲ್ಲಿಯೇ ಪ್ರಯಾಣಮಾಡಿದರು.

೨೫. ಅಷ್ಟು ಹೊತ್ತಿಗೆ ಸಮುದ್ರತೀರದಲ್ಲಿ ನಿಂತು ನೋಡುತ್ತಿದ್ದ ಪ್ರಜೆಗಳೆಲ್ಲರೂ ಸಾಕಾಗಿ ತಮ್ಮತಮ್ಮ ಕೆಲಸಗಳಿಗೆ ಹೊರಟುಹೋಗಿದ್ದರು. ಪೀಲಿಯಾಸನು ಮಾತ್ರ ತಾನಿದ್ದ ದಿಣ್ಣೆಯಿಂದ ಮೆಟ್ಟುಂಗಾಲು ಹಾಕಿಕೊಂಡು ಕಣ್ಣನ್ನು ಹೊಸಕಿಕೊಳ್ಳುತ್ತ ದೋಣಿಯು ಈಗ ಮುಳುಗಿಹೋಗುವುದು, ಆಗ ಮುಳುಗಿಹೋಗುವುದು, ಎಂದು ಭ್ರಮಿಸಿಕೊಳ್ಳುತ್ತ ನೋಡುತ್ತಲೇ ಇದ್ದುದು ಲಿಂಸಿಯಸ್ಸಿಗೆ ಕಾಣಬಂದಿತು. ಇದನ್ನು ಅವನು ತನ್ನ ಸಂಗಡಿಗರಿಗೆ ತಿಳಿಸಲು, ಅವರು ಗೊಳ್ಳೆಂದು ನಕ್ಕು ಮತ್ತಷ್ಟು ಉತ್ಸಾಹದಿಂದ ತಮ್ಮ ದೋಣಿಯನ್ನು ನಡೆಯಿಸಿಕೊಂಡು ಹೋದರು. ಬಿರುಗಾಳಿಯಿಂದ ಸಮುದ್ರವು ಉಲ್ಲೋಲಕಲ್ಲೋಲವಾದ ಕೂಡಲೆ ಆರ್ಫಿಯಸ್ಸನು ತನ್ನ ವೀಣೆಯನ್ನು ನುಡಿಸಲಾರಂಭಿಸಲು ಸಮುದ್ರವು ಶಾಂತವಾಗುತ್ತಿದ್ದಿತು. ಹೀಗೆ ದೋಣಿಯು ಯಾವ ಅಪಾಯವೂ ಇಲ್ಲದೆ ಸಮುದ್ರದಮೇಲೆ ದೊಡ್ಡತರಂಗಗಳ ನಡುವೆ ನಲಿಯುತ್ತ ಮುಂದಕ್ಕೆ ಹೊರಟಿತು.



# ಐದನೆಯ ಪ್ರಕರಣ.

## ನಾವಿಕರ ಮೊದಲನೆಯ ಸಂಮೋಹನ.

೨೬. ಜೇಸನ್ನನು ತನ್ನ ಸಂಗಡಿಗರೊಡನೆ ಐಯೊಲ್ಕಾಸ್ ಪಟ್ಟಣದಿಂದ ಪ್ರಯಾಣಹೊರಟಾಗ ಸಿಕ್ಕಿದ ಸಮುದ್ರಕ್ಕೆ "ಈಜಿಯನ್ ಸಮುದ್ರ" ಎಂಬ ಈಗಿನ ಹೆಸರಿರಲಿಲ್ಲ. ಜೇಸನ್ನಿನ ಸಂಗಡಿಗರಲ್ಲಿ ಒಬ್ಬನಾದ ಥೀಸಿಯಸ್ ಎಂಬವನ ತಂದೆಯ ಹೆಸರು ಈಜಿಯಸ್ ಎಂದು. ಆತನು ಪುತ್ರವ್ಯಾಮೋಹದಿಂದ ಆ ಸಮುದ್ರದಲ್ಲಿ ಬಿದ್ದು ಪ್ರಾಣವನ್ನು ಕಳೆದುಕೊಂಡುದರಿಂದ ಆಗಿನಿಂದಲೂ ಅದಕ್ಕೆ ಈಜಿಯನ್ ಸಮುದ್ರವೆಂದು ಹೆಸರಾಯಿತು. ಆ ಕಡಲಿನಲ್ಲಿ ಅನೇಕ ದ್ವೀಪಗಳಿರುವುವು. ಇವುಗಳಲ್ಲಿ ಲೆಮ್ನಾಸ್ ಎಂಬುದು ಪುರಾಣಪ್ರಸಿದ್ಧವಾದುದು. ನಮ್ಮ ಅಗ್ನಿದೇವನಿಗೂ ವಿಶ್ವಕರ್ಮನಿಗೂ ಸ್ವಲ್ಪ ಸ್ವಲ್ಪ ಹೋಲುವ ದೇವತೆಯೊಬ್ಬನು

ಗ್ರೀಕರಲ್ಲಿಯೂ ಇದ್ದನು. ಆತನಿಗೆ ಹೆಫೆಸ್ಟಸ್ ಎಂಬ ಹೆಸರಿದ್ದಿತು. ಒಂದಾ ನೊಂದು ಕಾಲದಲ್ಲಿ, ಗ್ರೀಕರ ದೇವದೇವನಾದ ಜ್ಯೂಸನು ಕೋಪಗೊಂಡು ಆತ ನನ್ನು ದೇವಲೋಕದಿಂದ ನೂಕಿಬಿಡಲು ಹೆಫೆಸ್ಟಸ್ಸನು ಈ ಲೆಮ್ನಾಸ್ ದ್ವೀಪದಲ್ಲಿ ಬಿದ್ದುಬಿಟ್ಟನೆಂದೂ, ಆಗ ಆ ದೇವತೆಗೆ ಒಂದು ಕಾಲು ಕುಂಟಾಯಿತೆಂದೂ, ಭೂಲೋಕದಲ್ಲಿ ಆ ದ್ವೀಪವು ಹೆಫೆಸ್ಟಸ್ಸಿಗೆ ಪ್ರೀತಿಪಾತ್ರವಾಯಿತೆಂದೂ ಗ್ರೀಕರಲ್ಲಿ ಭಾವನೆಯಿದ್ದಿತು.

೨೭. ಆ ದ್ವೀಪದ ನಿವಾಸಿಗಳು ಎಷ್ಟೋ ಕಾಲದಿಂದ ಆಫ್ರೊಡೈಟಿ ಎಂಬ ಒಬ್ಬ ದೇವತೆಯನ್ನು ಪೂಜಿಸುತ್ತಿದ್ದರು. ಆದರೆ ಈ ಕಾಲಕ್ಕೆ ಸ್ವಲ್ಪ ಮುಂಚೆ ಅವರು ತಮ್ಮ ಸುಖಸಂತೋಷಗಳಲ್ಲಿ ಆ ದೇವಿಯ ಆರಾಧನೆಯನ್ನು ಅಲಕ್ಷ್ಯಮಾಡಿಬಿಟ್ಟಿದ್ದರು. ದೇವರನ್ನು ನಿರಾಕರಿಸುವುದರಿಂದ ಎಂದಿಗೂ ಒಳ್ಳೆಯ ದಾಗದಷ್ಟೆ? ಆದುದರಿಂದ ಆಫ್ರೊಡೈಟಿಗೆ ಕೋಪಬಂದು ಆ ದ್ವೀಪದ ಪುರುಷರು ಕೊಲೆಯಾಗಿ ಹೋಗಲಿ ಎಂದು ಶಾಪವನ್ನು ಕೊಟ್ಟಿದ್ದ ಮೇರೆಗೆ ಆ ಶಾಪವು ಫಲಿಸಿ, ಆ ದ್ವೀಪದ ರಾಣಿಯ ಮುದುಕತಂದೆಯೊಬ್ಬನು ವಿನಾ ಉಳಿದ ಗಂಡಸ ರೆಲ್ಲರೂ ನಾಶವಾಗಿಹೋಗಿದ್ದರು. ಸುತ್ತುಮುತ್ತಲಿನ ದ್ವೀಪಗಳ ನಿವಾಸಿಗಳು ತಮಗೆ ಅನುಕೂಲವಾದ ಸಮಯವು ಸಿಕ್ಕಿತೆಂದು ತಿಳಿದು, ಲೆಮ್ನಾಸ್ ದ್ವೀಪಕ್ಕೆ ಬಂದು ನಿವಾಸಿಗಳಿಗೆ ಬಹಳ ಬಾಧೆಯನುಂಟುಮಾಡುತ್ತಿದ್ದರು. ಗ್ರೀಸಿನಿಂದ ಬಂದ ಈ ನಾವಿಕರು ಲೆಮ್ನಾಸಿನಲ್ಲಿ ಕಾಲಿಟ್ಟಕೂಡಲೆ ಅಲ್ಲಿಯ ರಾಣಿಯು ಜೇಸನ್ನಿನೊಡನೆ ತನ್ನ ದ್ವೀಪದ ಕಷ್ಟವನ್ನೆಲ್ಲಾ ಹೇಳಿಕೊಂಡು ಅದನ್ನು ಪರಿಹರಿಸ ಬೇಕೆಂದು ಆ ಶೂರರ ಸಾಹಾಯ್ಯವನ್ನು ಬೇಡಿದಳು. ಆರ್ಗೊ ಎಂಬ ತಮ್ಮ ದೋಣಿಯನ್ನು ಜೇಸನ್ನಿನ ಸಂಗಡಿಗರಲ್ಲಿ ಒಬ್ಬನಾದ ಹೆರ್ಕ್ಯಾಕ್ಲಸ್ ಎಂಬಾತನ ವಶದಲ್ಲಿ ಬಿಟ್ಟು ಉಳಿದವರೆಲ್ಲರೂ ದ್ವೀಪದೊಳಕ್ಕೆ ಹೋಗಿ ಅಲ್ಲಿದ್ದ ರಾಣಿಯ ಶತ್ರು ಗಳನ್ನೆಲ್ಲಾ ಚೆನ್ನಾಗಿ ಶಿಕ್ಷಿಸಿ ಅವರನ್ನು ಓಡಿಸಿಬಿಟ್ಟರು. ಇವರ ಉಪಕಾರಕ್ಕಾಗಿ ಆ ದ್ವೀಪದ ನಿವಾಸಿಗಳು ಜೇಸನ್ ಮೊದಲಾದವರನ್ನು ಬಹಳವಾಗಿ ಉಪಚರಿ ಸಿದರು.

೨೮. ದೋಣಿಯ ಕಾವಲಿಗಾಗಿ ಹಿಂದೆ ನಿಂತಿದ್ದ ಹೆರ್ಕ್ಯಾಕ್ಲಸ್ಸನು ಬಹಳ ಅಸಾಧಾರಣಪುರುಷನು. ದೇಹಬಲದ ವಿಷಯದಲ್ಲಿ ಈತನು ನಮ್ಮ ಭೀಮಸೇನ ನಂತೆಯೇ ಬಹುಪ್ರಸಿದ್ಧನು. ವಾಯುದೇವನ ಅಂಶವು ಭೀಮನಲ್ಲಿದ್ದಿತೆಂದು ನಾವು ಹೇಗೆ ಭಾವಿಸಿರುವೆವೋ, ಹಾಗೆಯೇ ಜ್ಯೂಸಿನ ಅಂಶವು ಹೆರ್ಕ್ಯಾಕ್ಲಿಸ್ಸಿನಲ್ಲಿದ್ದಿ

ತೆಂದು ಗ್ರೀಕರು ಭಾಷಿಸಿದ್ದರು. ಈ ಶೂರನು ಇನ್ನೂ ಎಂಟು ತಿಂಗಳ ಮಗು ವಾಗಿದ್ದಾಗ ದೊಡ್ಡ ಎರಡು ಹೆಬ್ಬಾವುಗಳನ್ನು ತನ್ನ ಪುಟ್ಟ ಹಿಡಿಗಳಿಂದ ಹಿಸುಕಿ ಕೊಂದುಬಿಟ್ಟನಂತೆ! ಈತನು ಹೀಗೆಯೇ ಅಸಾಧಾರಣವಾದ ಅನೇಕ ಕಾರ್ಯ ಗಳನ್ನು* ಮಾಡಿದ್ದುದರಿಂದ, ಗ್ರೀಕರಿಗೆ ಈತನಲ್ಲಿ ಬಹಳ ಗೌರವವಿದ್ದಿತು. ಆರ್ಗೋ ನಾವೆಯು ಪ್ರಯಾಣಮಾಡುವುದಕ್ಕೆ ಮುಂಚೆ ಆ ದೋಣಿಯ ನಾವಿಕರೆಲ್ಲರೂ ಹೆರ್ಕ್ಯಾಕ್ಲಸ್ಸನ್ನೇ ತಮ್ಮ ಪ್ರಮುಖನನ್ನಾಗಿ ಮಾಡಿಕೊಳ್ಳಲು ಯತ್ನಿಸಿ ಏಕವಾಕ್ಯ ದಿಂದ ಈ ವಿಷಯವಾಗಿ ಆತನನ್ನು ಪ್ರಾರ್ಥಿಸಿಕೊಂಡರು, ಆದರೆ ಮಹಾತ್ಮರಲ್ಲಿ ಸ್ವಾರ್ಥಪರತೆಯು ಇರುವುದಿಲ್ಲ. ಆದುದರಿಂದ, ಆ ದೋಣಿಯನ್ನು ಬಹುಕಷ್ಟ ಪಟ್ಟು ಏರ್ಪಡಿಸಿ, ತಮ್ಮೆಲ್ಲರನ್ನೂ ಗ್ರೀಸಿನ ನಾನಾಪ್ರಾಂತಗಳಿಂದ ಬರಮಾಡಿ ಕೊಂಡಿದ್ದ ಜೇಸನ್ನನೇ ಆ ದೋಣಿಗೆ ಮುಖ್ಯಸ್ಥನಾಗಿರಬೇಕೆಂದು ಹೆರ್ಕ್ಯಾ ಕ್ಲಸ್ಸನು ಪಟ್ಟುಹಿಡಿದುದು ಮಾತ್ರವಲ್ಲದೆ, ಜೇಸನ್ನಿನ ಆಜ್ಞಾನುಸಾರವಾಗಿಯೇ ತಾನೂ ನಡೆದುಕೊಳ್ಳುವುದಾಗಿ ಆಣೆಯಿಟ್ಟುಕೊಂಡನು. ತಮಗಿಂತಲೂ ಗಟ್ಟಿಗ ನಾದವನೇ ಹಾಗೆಹೇಳಲು, ಉಳಿದವರೂ ಜೇಸನ್ನನ್ನೇ ಸಂತೋಷದಿಂದ ತಮ್ಮ ಯಜಮಾನನನ್ನಾಗಿ ಅಂಗೀಕರಿಸಿದರು.

೨೯. ಹೆರ್ಕ್ಯಾಕ್ಲಸ್ಸನು ಬಲಿಷ್ಠನಾಗಿದ್ದುದು ಮಾತ್ರವಲ್ಲದೆ, ಬಹಳ ವಿವೇಕಿ ಯೂ ಆಗಿದ್ದನು. ಆದುದರಿಂದಲೇ ನಾವಿಕರು ಲೆಮ್ನಾಸಿನ ತೀರದಲ್ಲಿ ದೋಣಿ ಯನ್ನು ಅವನೊಬ್ಬನ ವಶದಲ್ಲಿಯೇ ಬಿಟ್ಟು ಧೈರ್ಯದಿಂದ ದ್ವೀಪವನ್ನು ಪ್ರವೇಶಿಸಿ ದ್ದುದು. ಭೋಗಭಾಗ್ಯಗಳು ಎಂತೆಂತಹವರನ್ನೂ ಸುಲಭವಾಗಿ ಮರುಳುಗೊಳಿಸಿ ಬಿಡುವುವು. ಆ ದ್ವೀಪದ ನಿವಾಸಿಗಳು ಜೇಸನ್ ಮೊದಲಾದವರಿಗೆ ಮಾಡಿದ ಆದರಾತಿಥ್ಯಗಳಿಂದ ಅವರ ಕರ್ತವ್ಯಜ್ಞಾನವು ಮುಸುಳಿಸಿಹೋಗಿದ್ದಿತು. ತಮ್ಮ ದೋಣಿಯನ್ನು ಬಿಟ್ಟು ಎಷ್ಟು ದಿನಗಳಾದುವೆಂಬುದನ್ನು ಅವರು ಸ್ವಲ್ಪ ಕಾಲದ ಲ್ಲಿಯೇ ಮರೆತುಬಿಟ್ಟರು. ಇತ್ತ ಹೆರ್ಕ್ಯಾಕ್ಲಸ್ಸನು ಒಂಟಿಯಾಗಿಯೇ ಇದ್ದು ಕೊಂಡು ತನ್ನ ಸಂಗಡಿಗರು "ಇಂದು ಹಿಂದಿರುಗುವರು; ನಾಳೆ ಬಂದುಬಿಡು ವರು" ಎಂದುಕೊಳ್ಳುತ್ತ ಅನೇಕ ತಿಂಗಳುಗಳನ್ನು ಕಳೆದನು. ಹೀಗೆ ಎರಡು ವರ್ಷಗಳಾದರೂ ತನ್ನ ಸಂಗಡಿಗರು ಬರುವ ಸುಳಿವೇ ಕಾಣಲಿಲ್ಲ. ಆದುದರಿಂದ ಸಮುದ್ರತೀರಕ್ಕೆ ಬಂದಿದ್ದ ಒಬ್ಬನನ್ನು ವಿಚಾರಿಸಿ, ತನ್ನ ಸಂಗಡಿಗರೆಲ್ಲರೂ

* ಕರ್ಣಾಟಕಗ್ರಂಥಮಾಲೆಯ ೧೧ನೆಯ ಗ್ರಂಥವಾದ "ಯವನಮಹಾವೀರಚರಿತೆ" ಯಲ್ಲಿ ಈ ಕಾರ್ಯಗಳನ್ನು ವಿಸ್ತಾರವಾಗಿ ವಿವರಿಸಿರುವುದು.

ಭೋಗಾಸಕ್ತರಾಗಿದ್ದುದನ್ನು ತಿಳಿದು ಹೆರ್ಕ್ಯಾಕ್ಲಿಸ್ಸನು ಅವರ ಕರ್ತವ್ಯಪರಾಙ್ಮುಖತೆಯನ್ನು ಚನ್ನಾಗಿ ಹಂಗಿಸಿ ಹೇಳಿಕಳುಹಿಸಿದನು.

೩೦. ಆಗ ಜೇಸನ್ನಿಗೆ ತಾನು ಹೊರಟಿದ್ದ ಕಾರ್ಯದ ವಿಷಯವೂ ತನ್ನ ತಂದೆಯು ಅಜ್ಞಾತವಾಸದಲ್ಲಿದ್ದ ಅಂಶವೂ ಜ್ಞಾಪಕಕ್ಕೆ ಬಂದುವು. ತಾನು ಹಾಗೆ ಸುಖಾಸಕ್ತನಾಗಿದ್ದುದಕ್ಕಾಗಿ ಬಹಳ ಮರುಗಿ ಕೂಡಲೆ ತನ್ನ ಸಂಗಡಿಗರನ್ನೆಲ್ಲ ಕರೆದುಕೊಂಡು ದೋಣಿಯ ಬಳಿಗೆ ಬಂದು, ಹೆರ್ಕ್ಯಾಕ್ಲಿಸ್ಸನ್ನು ಬಹಳವಾಗಿ ವಂದಿಸಿ, ಅವನ ಕ್ಷಮಾಪಣೆಯನ್ನು ಕೇಳಿಕೊಂಡನು. ಈ ಸಾರಿ ತಮಗೆ ಒದಗಿದ್ದ ತಡೆಯನ್ನು ಅವರಲ್ಲಿ ಅನೇಕರು ಮರೆಯದೆ ಜ್ಞಾಪಕದಲ್ಲಿಟ್ಟಿದ್ದುದರಿಂದ, ಅವರು ಮುಂದೆ ಭೋಗಾಪೇಕ್ಷಿಗಳಾಗದೆ ಎಷ್ಟೋ ಮಹಾಕಾರ್ಯಗಳನ್ನು ಮಾಡಲು ಸುಲಭವಾಯಿತು.

೩೧. ನಾವಿಕರೆಲ್ಲರೂ ದೋಣಿಯನ್ನು ಬೇಗಬೇಗನೆ ನಡೆಯಿಸಿಕೊಂಡು ಮುಂದಕ್ಕೆ ಹೊರಟರು. ದಾರಿಯಲ್ಲಿ ಸಣ್ಣ ಸಣ್ಣ ದ್ವೀಪಗಳು ಅನೇಕವಾಗಿ ಸಿಕ್ಕಿದುವು. ಅವರು ರಾತ್ರಿಯನ್ನು ಕಳೆಯುವುದಕ್ಕಾಗಿ ಯಾವುದಾದರೊಂದು ದ್ವೀಪದಲ್ಲಿ ನಿಲ್ಲುತ್ತ, ಪುನಃ ಹೊರಟು ಬಹುದೂರ ಪ್ರಯಾಣಮಾಡುತ್ತಹೋದರು. ಕಡೆಗೆ ಸ್ಯಾಮೊಥ್ರೇಸ್ ಎಂಬ ಒಂದು ದ್ವೀಪಕ್ಕೆ ಬಂದು ಅಲ್ಲಿ ಒಂದೆರಡು ದಿನ ತಂಗಿದ್ದರು. ಈ ದ್ವೀಪಕ್ಕೂ ಹೆಲ್ಲೆಸ್ಪಾಂಟ್ ಎಂಬ ಜಲಸಂಧಿಗೂ ಸುಮಾರು ೫೦ ಮೈಲುಗಳ ದೂರವಿರುವುದು. ಆಗ್ರೋ ನಾವಿಕರು ಈ ಜಲಸಂಧಿಯೊಳಗೆ ಪ್ರಯಾಣಮಾಡಿ ಮುಂದಕ್ಕೆ ಹೋಗಬೇಕಾಗಿದ್ದಿತು.

# ಆರನೆಯ ಪ್ರಕರಣ.

## ಕನಕೋರ್ಣದ ಪೂರ್ವವೃತ್ತಾಂತವು.

೩೨. ಜೇಸನ್ನಿಗೆ ಒಂದೆರಡು ತಲೆಗಳಿಗೆ ಹಿಂದೆ ಗ್ರೀಸಿನ ಬಿಯೋಷಿಯ ಎಂಬ ಪ್ರಾಂತದಲ್ಲಿ ಆಥಾಮಸ್ ಎಂಬೊಬ್ಬ ರಾಜನಿದ್ದನು. ಅವನು ಯುವಕನಾಗಿದ್ದಾಗ ತನ್ನ ರಾಜ್ಯದಲ್ಲಿದ್ದ ಒಂದು ಬೆಟ್ಟವನ್ನು ಒಂದು ಪ್ರಾತಃಕಾಲ ಸೂರ್ಯೋದಯಕ್ಕೆ ಮುಂಚೆ ಹತ್ತಿ ಅಲ್ಲಿಂದ ಸುತ್ತಮುತ್ತಲಿನ ಪ್ರಕೃತಿ ಸೌಂದರ್ಯವನ್ನು ನೋಡಿ ಆನಂದಪಟ್ಟುಕೊಳ್ಳುತ್ತಿದ್ದನು. ಆ ಸಮಯದಲ್ಲಿ ಕೆಲವರು ಸ್ತ್ರೀಯರ ಧ್ವನಿ

ಯು ಕೇಳಬಂದುದರಿಂದ, ಅವನು ಆ ಶಬ್ದವು ಕೇಳಬಂದ ದಿಕ್ಕಿಗೆ ತಿರುಗಿನೋಡಿದನು. ಆಗ ಆ ಬೆಟ್ಟದ ತಪ್ಪಲಿನಲ್ಲಿದ್ದ ಸುಂದರವಾದ ಒಂದು ಸರಸ್ಸಿನಲ್ಲಿ ಆವರಿಸಿಕೊಂಡಿದ್ದ ಆವಿಯ ನಡುವೆ ಕೆಲವರು ಸ್ತ್ರೀಯರು ಜಲಕ್ರೀಡೆಯಾಡುತ್ತಿದ್ದುದು ಕಂಡುಬಂದಿತು. ಸೂರ್ಯನುದಯಿಸಿ ಸ್ವಲ್ಪಕಾಲವಾದ ಕೂಡಲೆ ಆ ಸ್ತ್ರೀಯರು ಮೊದಮೊದಲು ಪ್ರಾತಃಕಾಲದ ಮೇಘಗಳಂತೆ ಹಾರಿಹೋಗುತ್ತ ಸ್ವಲ್ಪ ಹೊತ್ತಿನಲ್ಲಿಯೇ ಅದೃಶ್ಯರಾಗಿಹೋದರು. ಅಥಾಮಸ್ಸಿಗೆ ಆ ಯುವತಿಯರಲ್ಲಿ ಒಬ್ಬಳ ಮೇಲೆ ಅನುರಾಗವು ಹುಟ್ಟಿದುದರಿಂದ, ಅವನು ಆಕೆಯನ್ನು ಎಡೆಬಿಡದೆ ನೆನೆದುಕೊಳ್ಳುತ್ತ ರಾಜಧಾನಿಗೆ ಬಂದನು.

೩೩. ಬಹಳ ದಿನಗಳವರೆಗೂ ಅಥಾಮಸ್ಸನ್ನು ಆ ಚಿಂತೆಯು ಬಾಧಿಸುತ್ತಲೇ ಇದ್ದಿತು. ಒಂದಾನೊಂದು ರಾತ್ರಿ ಅನುರಾಗಾಭಿಮಾನದೇವತೆಯಾದ ಆಫ್ರೊಡೈಟಿಯು ಅಥಾಮಸ್ಸಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ಆ ಸ್ತ್ರೀಯು ನೆಫೇಲಿ ಎಂಬೊಬ್ಬ ಮೇಘಕನ್ನಿಕೆಯೆಂದು ತಿಳಿಸಿ, ಆಕೆಯನ್ನು ಮದುವೆಯಾಗಲು ಮಾಡಬೇಕಾದ ಉಪಾಯವನ್ನೂ ತಿಳಿಸಿದಳು. ಆತನು ಅದೇ ಮೇರೆಗೆ ಮಾಡಲು ನೆಫೇಲಿಯು ಬಟ್ಟಬೇಸಗೆಯಲ್ಲಿ ವಿನಾ ಉಳಿದ ದಿನಗಳು ಪ್ರಾತಸ್ಸಾಯಂಕಾಲಗಳಲ್ಲಿ ಮಾತ್ರ ಆತನೊಡನೆ ಇರುವುದಾಗಿ ಒಪ್ಪಂದಮಾಡಿಕೊಂಡು ಅಥಾಮಸ್ಸನ್ನು ಮದುವೆಯಾಗಿ ಕೆಲವುಕಾಲವಾದ ಬಳಿಕ ಫ್ರಿಕ್ಸಸ್ ಎಂಬ ಪುತ್ರನನ್ನೂ, ಹೆಲ್ಲೆ ಎಂಬ ಪುತ್ರಿಯನ್ನೂ ಪ್ರಸವಿಸಿದಳು. ಈ ಮಕ್ಕಳು ಬಹಳ ಸ್ಫುರದ್ರೂಪಿಗಳೂ ಸುಗುಣಿಗಳೂ ಆಗಿದ್ದುದರಿಂದ ಇವರನ್ನು ಕಂಡು ಎಲ್ಲರೂ ಬಹಳ ಸಂತೋಷಪಡುತ್ತಿದ್ದರು. ಇವರಿಗೆ ಸುಂದರವಾದ ಒಂದು ಕುರಿಯಮರಿಯಮೇಲೆ ಬಹಳ ಪ್ರೇಮವಿದ್ದಿತು. ದೇವಾಂಶಸಂಭೂತವಾಗಿದ್ದ ಇದನ್ನು ನೆಫೇಲಿಯ ಪ್ರಾರ್ಥನೆಯ ಮೇರೆಗೆ ಒಬ್ಬ ದೇವನು ಆ ಮಕ್ಕಳ ಬಳಿಗೆ ಕಳುಹಿಸಿದ್ದನು.

೩೪. ನೆಫೇಲಿಯು ಆಗಾಗ ಅರಮನೆಯನ್ನು ಬಿಟ್ಟು ಮಾಯವಾಗುತ್ತಿದ್ದುದರಿಂದ ಆಕೆಯ ವಿಷಯದಲ್ಲಿ ಅಥಾಮಸ್ಸಿಗೆ ಕೆಲವು ದಿನಗಳಲ್ಲಿಯೇ ಅನಾದರವುಂಟಾಗಿ ಐನೊ ಎಂಬ ಮತ್ತೊಬ್ಬ ಹೆಂಡತಿಯನ್ನು ಮದುವೆಯಾದನು. ಇದರಿಂದ ನೆಫೇಲಿಗೆ ಮುನಿಸು ಹುಟ್ಟಿ ಅವಳು ಅಥಾಮಸ್ಸಿಗೆ ಕಾಣಿಸಿಕೊಳ್ಳದೆಯೇ ಹೋದಳು. ಆದುದರಿಂದ ರಾಜನು ಕಿರಿಯ ಹೆಂಡತಿಯನ್ನೇ ಮತ್ತಷ್ಟು ಪ್ರೀತಿಸುತ್ತ ಬಂದನು. ಆಕೆಗೂ ಸ್ವಲ್ಪದಿನಗಳಲ್ಲಿಯೇ ಒಬ್ಬ ಮಗನೂ ಒಬ್ಬ ಮಗಳೂ ಹುಟ್ಟಿದ್ದರು. ಆದರೆ ಇವರು ತಮ್ಮ ತಾಯಿಯಂತೆಯೇ ಕಪ್ಪಗೂ ಸಿಡುಕಿನ ಸ್ವಭಾವದವರಾಗಿಯೂ ಇದ್ದರು.

೩೫. ಏನೋ ರಾಣಿಯು ಮಂತ್ರತಂತ್ರಗಳನ್ನು ತಿಳಿದಿದ್ದ ಮಾಟಗಾತಿ. ಆದರೆ ಈಕೆಯು ಶಕ್ತಿಯು ಅನೇಕರಿಗೆ ತಿಳಿದಿರಲಿಲ್ಲ. ಕೆಲವು ದಿನಗಳಲ್ಲಿಯೇ ಈಕೆಯು ನೆಫೇಲಿಗೆ ಹುಚ್ಚು ಹಿಡಿಸಿದುದಲ್ಲದೆ ಅವಳ ಮಕ್ಕಳನ್ನು ನಾಶಮಾಡಬೇಕೆಂದು ಉಪಾಯವನ್ನು ಯೋಚಿಸುತ್ತಿದ್ದಳು. ನೆಫೇಲಿಗೆ ಬಂದ ಕಷ್ಟವನ್ನು ನೋಡಿ ಆಕೆಯ ಸೋದರಿಯರು ಅಥಾಮಸ್ಸಿನ ರಾಜ್ಯದಮೇಲೆ ಅನಾದರ ತೋರಿಸಿದುದರಿಂದ ಆ ರಾಜ್ಯದಲ್ಲಿ ಮಳೆಬೆಳೆಗಳಾಗದೆ ಬರವು ಬಂದಿತು. ಆದ ಕಾರಣ, ಕ್ಷಾಮನಿವಾರಣೆಗಾಗಿ ಏನುಮಾಡಬೇಕೆಂಬುದನ್ನು ಕೇಳಿ ತಿಳಿದುಕೊಂಡು ಬರುವುದಕ್ಕಾಗಿ ಡೊಡೋನಾದಲ್ಲಿದ್ದ ವೃಕ್ಷದ ಬಳಿಗೆ ಚಾರರನ್ನು ಕಳುಹಿಸುವಂತೆ ಏನೋರಾಣಿಯು ಅಥಾಮಸ್ಸಿಗೆ ಬೋಧಿಸಿದಳು. ಅದೇಮೇರೆಗೆ ಅವನು ಕಳುಹಿಸಿದ್ದ ಚಾರರನ್ನು ಏನೋಗುಟ್ಟಾಗಿ ತನ್ನ ಬಳಿಗೆ ಕರೆಯಿಸಿಕೊಂಡು ಅವರಿಗೆ ಲಂಚವನ್ನು ಕೊಟ್ಟು, "ರಾಜನು ತನ್ನ ಮೊದಲಹೆಂಡತಿಯ ಮಕ್ಕಳನ್ನು ಬಲಿಕೊಟ್ಟರೆ ಕ್ಷಾಮನಿವಾರಣೆಯಾಗುವುದು" ಎಂದು ವೃಕ್ಷವು ಹೇಳಿತೆಂದು ಬಂದು ತಿಳಿಸುವಂತೆ ತಂತುಮಾಡಿದಳು.

೩೬. ಚಾರರು ಹಿಂದಿರುಗಿ ಬಂದಮೇಲೆ ಅವರಿಂದ ವೃತ್ತಾಂತವನ್ನು ಕೇಳಿ ಅಥಾಮಸ್ಸನು ಬಹಳವಾಗಿ ಶೋಕಿಸಿದನು. ಆದರೆ ಏನೋ ಆತನನ್ನು ಎಡೆಬಿಡದೆ ಕಾಡಿದುದರಿಂದಲೂ, ಕ್ಷಾಮಬಾಧೆಯು ರಾಜ್ಯದಲ್ಲೆಲ್ಲ ಹೆಚ್ಚಿದುದರಿಂದಲೂ ಅಥಾಮಸ್ಸನು ತನ್ನ ಮಕ್ಕಳನ್ನು ಬಲಿಕೊಡಲು ಸಮ್ಮತಿಸಬೇಕಾಯಿತು. ಫ್ರಿಕ್ಸಸ್, ಹೆಲ್ಲೆ ಎಂಬ ಆ ಮಕ್ಕಳಿಬ್ಬರಿಗೂ ಹೂವಿನಹಾರಗಳನ್ನು ಹಾಕಿ ಬಲಿಪೀಠದ ಬಳಿಗೆ ತಂದುನಿಲ್ಲಿಸಿದರು. ಆಗ ಅಥಾಮಸ್ಸಿಗೆ ಅತ್ಯಂತ ದುಃಖವುಂಟಾಗಿ ಕಣ್ಣುಗಳಲ್ಲಿ ನೀರು ತುಂಬಿಕೊಂಡು ದಿಕ್ಕೇತೋರದಂತಾಗಿ ಅವನು ಮೂರ್ಛೆ ಹೋದನು. ಏನೋ ಮೊದಲಾದವರು ಮಾಡಿದ ಶೈತ್ಯೋಪಚಾರದಿಂದ ಅವನಿಗೆ ಎಚ್ಚರವುಂಟಾಗುವ ಸಮಯಕ್ಕೆ ಸರಿಯಾಗಿ, ಆ ಮಕ್ಕಳ ಒಡನಾಡಿಯಾಗಿದ್ದ ಕುರಿಮರಿಯು ಎಲ್ಲಿಂದಲೋ "ಬ್ಯಾ! ಬ್ಯಾ!" ಎಂದು ಅರಚುತ್ತ ಅಲ್ಲಿಗೆ ಬಂದು ಮನುಷ್ಯಧ್ವನಿಯಿಂದ "ಈ ಅನ್ಯಾಯದ ಯಜ್ಞವು ದೇವರಿಗೆ ಸಮ್ಮತವಿಲ್ಲ" ಎಂದು ಗಟ್ಟಿಯಾಗಿ ಹೇಳಿ, ತನ್ನ ಸಂಗಾತಿಗಳಾಗಿದ್ದ ಆ ಮಕ್ಕಳನ್ನು ತನ್ನ ಬೆನ್ನಿನಮೇಲೆ ಕುಳ್ಳಿರಿಸಿಕೊಂಡಿತು. ಕೂಡಲೆ ಅದಕ್ಕೆ ಎರಡು ರೆಕ್ಕೆಗಳು ಹುಟ್ಟಿದುವು. ತಟ್ಟನೆ ಆ ಕುರಿಯು ಆಕಾಶಕ್ಕೆ-ನೆಗೆದು ಪೂರ್ವಾಭಿಮುಖವಾಗಿ ಹೊರಟು ದಾರಿಯಲ್ಲಿ ಸಿಕ್ಕಿದ ಅನೇಕ ದ್ವೀಪಗಳಲ್ಲಿದ್ದ ಬೆಟ್ಟಗುಡ್ಡಗಳನ್ನೂ ಸಮುದ್ರವನ್ನೂ ದಾಟಿ ಮುಂದೆಮುಂದೆ ಹೋಯಿತು.

೩೭. ಮಧ್ಯದಲ್ಲಿ ಇತ್ತ ಕಡೆ ಭೂಮಿಯೂ ನಡುವೆ ಸಮುದ್ರದ ಕಾಲುವೆಯೂ ಇದ್ದ ಒಂದು ಪ್ರದೇಶದ ಬಳಿಗೆ ಈ ಮೂವರೂ ಬಂದರು. ದೂರದಲ್ಲಿ ಬೆಟ್ಟಗುಡ್ಡಗಳು ಕಾಣಿಸುತ್ತಿದ್ದುವು. ಆಗ ಒಂದು ದೊಡ್ಡ ಬಿರುಗಾಳಿಯೆದ್ದಿತು. ಕೆಳಗಡೆ ಸಮುದ್ರದಲ್ಲಿ ಬಹಳ ದೊಡ್ಡದೊಡ್ಡ ಅಲೆಗಳು ಏಳುತ್ತ ಒಂದೊಂದಕ್ಕೆ ಬಹುರಭಸದಿಂದ ಬಡಿದು ತುಂತುರುಗಳು ಮೇಲಕ್ಕೆ ಹಾರುತ್ತಿದ್ದುವು. ಸಾಲದುದಕ್ಕೆ ಇದಿರುಕಡೆಯಿಂದ ಒಂದು ಜಲಪ್ರವಾಹವು ಬಲವಾಗಿ ಹರಿಯುತ್ತಿದ್ದಿತು. ಆದರೂ ಅದ್ಭುತವಾದ ಧೈರ್ಯಸಾಹಸಾದಿಗಳಿದ್ದ ಆ ಅಸಾಧಾರಣವಾದ ಕುರಿಯು ಬಹು ವೇಗವಾಗಿ ಸಂಚರಿಸುತ್ತಿದ್ದುದರಿಂದ, ಫ್ರಿಕ್ಸಸ್ಸಿಗೆ ಬಲುದಣಿವಾಗುತ್ತಿದ್ದಿತು; ಹೆಲ್ಲೆಗಂತೂ, ಈ ಜಲಸಂಧಿಯ ಮೇಲ್ಗಡೆ ಸ್ವಲ್ಪದೂರ ಬರುವುದರೊಳಗಾಗಿ ಉಸಿರಾಡುವುದೂ ಕಷ್ಟವಾಯಿತು; ತಲೆತಿರುಗುತ್ತಬಂದಿತು; ಕಣ್ಣುಗಳಿಗೆ ಕತ್ತಲೆ ಕವಿದುಕೊಂಡಿತು, ಆ ಕುರಿಯ ತುಬಟವನ್ನು ಹಿಡಿದುಕೊಂಡಿದ್ದ ಹಿಡಿತವು ಸಡಿಲವಾಗಿ, ಅವಳು ಸಮುದ್ರದೊಳಕ್ಕೆ ಬಿದ್ದು ಮುಳುಗಿಹೋದಳು. ಆಗಲಿಂದಲೂ ಆ ಜಲಸಂಧಿಗೆ ಹೆಲ್ಲೆಸ್ಪಾಂಟ್ ಎಂದು ಹೆಸರಾಯಿತು.

೩೮. ತರುವಾಯ ಆ ಕುರಿಯು ಫ್ರಿಕ್ಸಸ್ಸನೊಬ್ಬನನ್ನೇ ಹೊತ್ತುಕೊಂಡು ಬಲುಜಾಗರೂಕತೆಯಿಂದ ಮುಂದಮುಂದಕ್ಕೆ ಹೋಯಿತು. ಕೂಡಲೆ ಒಂದು ಸಮುದ್ರವನ್ನು ದಾಟಿ, ಮತ್ತೊಂದನ್ನು ಪ್ರವೇಶಿಸಿ ಅದರ ಪೂರ್ವದ ದಡದ ಸಮೀಪದಲ್ಲಿ ಎಯೀ ಎಂಬ ಒಂದು ದ್ವೀಪಕ್ಕೆ ಬಂದು ಅಲ್ಲಿ ಫ್ರಿಕ್ಸಸ್ಸನ್ನು ಇಳಿಸಿ ಆ ಕುರಿಯು ಸತ್ತುಬಿದ್ದಿತು. ಅದರ ಸಾಹಸವನ್ನು ಕಂಡು ಜ್ಯೂಸಿಗೆ ಪರಮ ಸಂತೋಷವಾಗಿ ಅದರ ತುಬಟವು ಚಿನ್ನವಾಗಲೆಂದು ಆ ದೇವದೇವನು ಅನುಗ್ರಹಿಸಿದನು. ಫ್ರಿಕ್ಸಸ್ಸನು ಅದನ್ನು ಅತಿಕೃತಜ್ಞತೆಯಿಂದ ಜ್ಯೂಸಿಗೇ ಸಮರ್ಪಿಸಿ ಎತ್ತರವಾದ ಒಂದು ಮರದಮೇಲೆ ತಗುಲಹಾಕಿ ತಾನು ಅದರ ಬಳಿಯಲ್ಲಿ ವಿಶ್ರಮಿಸಿಕೊಂಡನು.

೩೯. ಎಯೀ ಎಂಬ ದ್ವೀಪವೇ ಕಾಲ್ಚಿಸ್ ಎಂಬ ರಾಜ್ಯಕ್ಕೆ ರಾಜಧಾನಿಯಾಗಿದ್ದಿತು. ಇಲ್ಲಿಗೆ ಎಯೀಟೀಸ್ ಎಂಬಾತನು ದೊರೆಯಾಗಿದ್ದನು. ಈತನೂ ಈತನ ತಂಗಿಯಾದ ಸರ್ಸಿ ಎಂಬ ಮಾಟಗಾತಿಯೂ ಸೂರ್ಯಾಂಶಸಂಭವರು. ಇವರು ನೆಫೇಲಿಗೆ ದೂರಬಂಧುಗಳಾಗಿದ್ದರು. ನೆಫೇಲಿಯ ಮಕ್ಕಳನ್ನು ಇಲ್ಲಿಗೆ ತಂದುಬಿಟ್ಟರೆ ಅವರಿಗೆ ಅಪಾಯವಿರದೆಂದು ಭಾವಿಸಿ ಆ ಕುರಿಯು ಹಾಗೆ ಮಾಡಿದ್ದಿತು.

೪೦. ಆದರೆ ಎಯೀಟೀಸಿಗೆ ಆ ಕನಕರ್ಣದ ಮೇಲೆ ಬಹಳ ಆಸೆಯುಂಟಾದುದರಿಂದ, ಅವನು ಫ್ರಿಕ್ಸಸ್ಸನ್ನು ಬಹಳವಾಗಿ ಉಪಚರಿಸಿ ಖಾಲ್ಸಿಯೋಪಿ ಎಂಬ ತನ್ನೊಬ್ಬ ಮಗಳನ್ನು ಅವನಿಗೆ ಮದುವೆಮಾಡಿಕೊಟ್ಟನು. ಕೆಲವು ವರುಷಗಳಾದ ಬಳಿಕ ಆ ಕನಕರ್ಣವನ್ನು ಅಪಹರಿಸಬೇಕೆಂಬ ದುರಾಶೆಯು ಹುಟ್ಟಿ, ಅವನು ಉಪಾಯದಿಂದ ಫ್ರಿಕ್ಸಸ್ಸನ್ನು ಕೊಲ್ಲಿಸಿಬಿಟ್ಟನೆಂದು ಹೇಳುವರು. ಆದುದರಿಂದ ಫ್ರಿಕ್ಸಸ್ಸಿನ ಆತ್ಮಕ್ಕೆ ಶಾಂತಿಯಿಲ್ಲದೆ, ಗ್ರೀಸಿನ ಶೂರರಿಗೆ ಅದು ಆಗಾಗ ಕನಸಿನಲ್ಲಿ ಕಾಣಿಸಿಕೊಳ್ಳುತ್ತ ತನ್ನ ಕೊಲೆಗೆ ಮುಯ್ಯಿತೀರಿಸಿಕೊಳ್ಳಬೇಕೆಂದು ಅವರನ್ನು ಕೇಳಿಕೊಳ್ಳುತ್ತಿದ್ದಿತಂತೆ! ಈ ಪ್ರತೀಕಾರೇಚ್ಛೆಯಿಂದ ಅನೇಕ ಶೂರರು ಪ್ರಯತ್ನಿಸಿ ತಮ್ಮ ಪ್ರಾಣವನ್ನು ಕಳೆದುಕೊಂಡಿದ್ದರು. ಜೇಸನ್ ಮೊದಲಾದವರೂ ಪ್ರಯಾಣಮಾಡುತ್ತಿದ್ದುದು ಈ ಉಣ್ಣೆಯನ್ನು ಗ್ರೀಸಿಗೆ ತರುವುದರ ಮೂಲಕ ದೇವರ ಶಾಪದಂತೆ ಎಯೀಟೀಸನ್ನು ದಂಡಿಸಿ ಫ್ರಿಕ್ಸಸ್ಸಿನ ಆತ್ಮಕ್ಕೆ ತೃಪ್ತಿಯನ್ನುಂಟುಮಾಡುವುದಕ್ಕಾಗಿಯೇ.

# ಏಳನೆಯ ಪ್ರಕರಣ.

## ಆರುಕೈಗಳ ರಾಕ್ಷಸರ ವೃತ್ತಾಂತವು.

ಹೆಲ್ಲೆಸ್ಪಾಂಟ್ ಜಲಸಂಧಿಯನ್ನು ದಾಟಿದ ಕೂಡಲೆ ಆರ್ಗೊನಾವಿಕರಿಗೆ ಸಿಕ್ಕಿದ ಸಮುದ್ರಕ್ಕೆ ಆ ಕಾಲದಲ್ಲಿ ಪ್ರೊಪಾಂಟಿಸ್ ಎಂದು ಹೆಸರಿದ್ದಿತು. ಈ ಕಡಲಿನಲ್ಲಿ ಒಂದು ಹಗಲು ಪ್ರಯಾಣಮಾಡಿದಮೇಲೆ ಅವರು ತಮ್ಮ ಬಲಗಡೆಯಿದ್ದ ದಡಕ್ಕೆ ಬಂದು ತಂಗಿದರು. ಬೆಳಗಾಗುತ್ತಲೆ ಅದು ಯಾವ ರಾಜ್ಯವೆಂದು ವಿಚಾರಿಸಲಾಗಿ, ಅದು ಮಿಸಿಯಾ ಎಂದು ತಿಳಿದುಬಂದಿತು. ಹೆರ್ಕ್ಯಾಕ್ಲಸ್ಸನೂ ಮತ್ತೆ ಕೆಲವರು ನಾವಿಕರೂ ಜೇಸನ್ನಿನ ಅನುಮತಿಯನ್ನು ಪಡೆದು, ಸ್ವಲ್ಪದೂರ ಸುತ್ತಾಡಿಕೊಂಡು ಹಿಂದಿರುಗುತ್ತಿದ್ದಾಗ, ಈ ಗುಂಪನ್ನು ಹೈಲಾಸ್ ಎಂಬೊಬ್ಬ ತರುಣನು ಸಂಧಿಸಿದನು. ಅವನು ಹೆರ್ಕ್ಯಾಕ್ಲಸ್ಸನ್ನು ಕಂಡಕೂಡಲೆ ಅವನ ದೃಢತರವಾದ ಮೈಕಟ್ಟನ್ನೂ, ಕಟ್ಟಾಳಿನ ಇತರ ಲಕ್ಷಣಗಳನ್ನೂ ಕಂಡು, ತನ್ನನ್ನು ಶಿಷ್ಯನನ್ನಾಗಿ ಅಂಗೀಕರಿಸುವಂತೆ ಹೆರ್ಕ್ಯಾಕ್ಲಸ್ಸನ್ನು ಪ್ರಾರ್ಥಿಸಿಕೊಂಡನು. ಆ ಯುವಕನು ಯಾರೆಂದು ವಿಚಾರಿಸಲಾಗಿ ಅವನು ಆ ದೇಶದ ರಾಜಪುತ್ರನೆಂದು

ತಿಳಿಯಬಂದಿತು. ಆಗ ಹೆರ್ಕ್ಯಾಕ್ಲಸ್ಸನು ಆ ತರುಣನನ್ನು ಕುರಿತು “ನೀನು ನಿನ್ನ ತಾಯಿತಂದೆಗಳನ್ನೂ ರಾಜ್ಯವನ್ನೂ ಬಿಟ್ಟು, ಬಹಳ ಅಪಾಯಕರವಾದ ಕೆಲಸಕ್ಕಾಗಿ ಹೋಗುತ್ತಲಿರುವ ನಮ್ಮೊಡನೆ ಬರುವುದು ಸರಿಯಲ್ಲ” ಎಂದು ಎಷ್ಟು ಸಾರಿ ಹೇಳಿದರೂ, ಹೈಲಾಸನು ಕೇಳಲಿಲ್ಲ. ಆದುದರಿಂದ ಅವನು ಆ ತರುಣನನ್ನು ತನ್ನ ಕೂಡ ಕರೆದುಕೊಂಡು, ತನ್ನ ಸಂಗಡಿಗರೊಡನೆ ದೋಣಿಗೆ ಬಂದು ಸೇರಿದನು. ಆರ್ಗೋನಾವಿಕರೆಲ್ಲರೂ ಹೈಲಾಸಿನ ಮುಖಲಕ್ಷಣಗಳನ್ನೂ ವಿನಯಾದಿ ಸದ್ಗುಣಗಳನ್ನೂ ಕಂಡು ಬಹಳ ಸಂತೋಷಪಟ್ಟರು.

೪೨. ದೋಣಿಯು ಪುನಃ ಪ್ರಯಾಣಹೊರಟು ಸಿಜಿಕಸ್ ಎಂಬ ಒಂದು ದ್ವೀಪದ ಸಮೀಪಕ್ಕೆ ಬಂದಿತು. ಅದರ ಒಂದು ಕಡೆಯು ಸಮುದ್ರತೀರದಲ್ಲಿ ಎತ್ತರವಾದ ಪರ್ವತಗಳಿದ್ದವು. ಮತ್ತೊಂದು ಕಡೆ ಇಳಿಜಾರಾಗಿದ್ದ ನೆಲವಿದ್ದಿತು. ಸಮುದ್ರದ ಉಬ್ಬರವು ಇಲ್ಲದಿದ್ದಾಗ ಭೂಭಾಗಕ್ಕೂ ಈ ದ್ವೀಪಕ್ಕೂ ನಡುವೆ ಒಂದು ಆಳುಮಟ್ಟವೂ ಇಲ್ಲದ ನೀರು ಇರುತ್ತಿದ್ದಿತು. ಆರ್ಗೋನಾವೆಯನ್ನು ನಡೆಯಿಸುತ್ತಿದ್ದ ಟಿಫಿಸ್ ಎಂಬ ಕುಶಲನಾವಿಕನು ಈ ಆಳವಿಲ್ಲದ ಪ್ರದೇಶಕ್ಕೆ ದೋಣಿಯನ್ನು ತಂದುಬಿಟ್ಟನು. ಇಷ್ಟುಹೊತ್ತಿಗೆ ಅಲ್ಲಿಯ ಕೆಲವರು ನಿವಾಸಿಗಳು ಈ ಪ್ರದೇಶಕ್ಕೆ ಬಂದು ಕಾದುಕೊಂಡಿದ್ದರು. ಅವರುಗಳಲ್ಲಿ ಮುಂದಾಳಾಗಿದ್ದವನನ್ನು ನೋಡಿದರೆ ಅವನು ಈ ಪ್ರಾಂತದ ರಾಜನಾಗಿದ್ದಂತೆ ತೋರುತ್ತಿದ್ದಿತು. ಅವನು ನಾವಿಕರನ್ನು ಕುರಿತು “ನೀವು ಯಾರು? ಇಲ್ಲಿಗೆ ಏಕೆ ಬಂದಿರಿ? ನಿಮಗೆ ಈ ರಾಜ್ಯವನ್ನು ಆಕ್ರಮಿಸಬೇಕೆಂಬ ಇಷ್ಟವಿದ್ದರೆ ನಮ್ಮೊಡನೆ ಯುದ್ಧಕ್ಕೆ ಸಿದ್ಧರಾಗಿ” ಎಂದು ಹೇಳಿದನು. ಇದಕ್ಕೆ ಜೇಸನ್ನನು ವಿನಯದಿಂದ ತಮ್ಮ ಉದ್ದೇಶವನ್ನು ತಿಳಿಸಲು, ಸಿಜಿಕಸ್ ಎಂಬುದಾಗಿಯೇ ಹೆಸರಿದ್ದ ಆ ದೊರೆಯು ಆರ್ಗೋ ನಾವಿಕರನ್ನು ಕುರಿತು ತನ್ನ ರಾಜ್ಯದಲ್ಲಿ ಎರಡು ಮೂರು ದಿನಗಳಿದ್ದು ತನ್ನ ಆತಿಥ್ಯವನ್ನು ಸ್ವೀಕರಿಸಬೇಕೆಂದು ಕೇಳಿಕೊಂಡನು. ನಾವಿಕರೂ ಆತನ ವಿನಯಪೂರ್ವಕವಾದ ಆಹ್ವಾನವನ್ನು ಅಂಗೀಕರಿಸಿದರು.

೪೩. ಪ್ರಾಯಶಃ ಪೂರ್ವಕಾಲದ ಜನರೆಲ್ಲಾ ಅತಿಥಿಗಳನ್ನು ದೇವರಂತೆ ಭಾವಿಸುತ್ತಿದ್ದರು. ಅನೇಕ ವೇಳೆಗಳಲ್ಲಿ ದೇವತೆಗಳೇ ಅತಿಥಿಗಳ ವೇಷವನ್ನು ಹಾಕಿಕೊಂಡು ಬಂದು, ಮಾನವರ ಸೇವೆಯನ್ನು ಪರಿಗ್ರಹಿಸುತ್ತಿದ್ದರೆಂದು ಆ ಕಾಲದ ಜನರಲ್ಲಿ ಪ್ರಬಲವಾದ ನಂಬಿಕೆಯಿದ್ದಿತು. ಸಿಜಿಕಸ್ಸನು ತನ್ನ ಅತಿಥಿಗಳನ್ನು ಬಹಳ ಆದರದಿಂದ ಸತ್ಕರಿಸಿದನು. ಆದರೆ ಆತನ ಮುಖದಲ್ಲಿ ಯಾವುದೋ

ಚಿಂತೆಯ ಕುರುಹು ಕಾಣುತ್ತಿದ್ದುದನ್ನು ಜೇಸನ್ನನು ನೋಡಿ, "ನೀನು ಚಿಂತಿಸುತ್ತಿರುವಂತೆ ತೋರುವೆ? ನಿನಗೇನಾದರೂ ಚಿಂತೆಯಿದ್ದರೆ, ಅದನ್ನು ಹೋಗಲಾಡಿಸಲು ನಮ್ಮಿಂದೇನಾದರೂ ಸಾಹಾಯ್ಯವಾಗಬಹುದಾದ ಪಕ್ಷದಲ್ಲಿ ನಮ್ಮನ್ನು ನಿನ್ನವರೆಂದೇ ತಿಳಿದುಕೊಂಡು ನಮ್ಮ ಸೇವೆಯನ್ನು ಅಂಗೀಕರಿಸಬೇಕು" ಎಂದು ವಿನಯದಿಂದ ಕೇಳಿಕೊಂಡನು. ಆಗ ಸಿಜಿಕಸ್ಸನು "ಜೇಸನ್! ನನ್ನ ರಾಜ್ಯಕ್ಕೆ ಬಾಧೆಯನ್ನುಂಟುಮಾಡುವ ಕೆಲವರು ರಾಕ್ಷಸರು, ಅಗೋ! ಆ ಪರ್ವತದ ಮೇಲ್ಗಡೆ ವಾಸಿಸುತ್ತಿರುವರು. ಅವರಿಗೆ ಆರಾರು ಕೈಗಳಿವೆ. ಬಗೆಬಗೆಯ ಆಯುಧಗಳನ್ನು ತಮ್ಮ ಕೈಗಳಲ್ಲಿ ಧರಿಸಿ ಆಗಾಗ ಅವರು ನನ್ನ ರಾಜ್ಯಕ್ಕೆ ಬಂದು ಹಾವಳಿಯನ್ನು ಮಾಡುತ್ತಿರುವರು. ಅವರ ಕಾಟದಿಂದ ನನ್ನ ಪ್ರಜೆಗಳಿಗೆ ಉಳಿಗಾಲವಿಲ್ಲದಿರುವುದು. ಇದೇ ನನ್ನ ಚಿಂತೆಗೆ ಕಾರಣವು" ಎಂದು ತಿಳಿಸಿದನು.

೪೪. ಈ ಮಾತುಗಳನ್ನು ಕೇಳಿದ ಕೂಡಲೆ ಆರ್ಗೋನಾವಿಕರೆಲ್ಲರೂ ಬೆಟ್ಟದ ಶಿಖರದ ಕಡೆಗೆ ತಿರುಗಿನೋಡಿದರು. "ಅಲ್ಲಿ ಯಾರೂ ಇಲ್ಲವಲ್ಲಾ!" ಎಂದು ಅನೇಕರು ಎಂದರು. ಒಬ್ಬರಿಬ್ಬರು "ಅಲ್ಲಿ ಕೆಲವು ಕಂಬಗಳು ಮಾತ್ರ ಕಾಣುತ್ತಿವೆ" ಎಂದರು; ಇನ್ನು ಕೆಲವರು—"ಛೆ! ಅವು ಕಂಬಗಳು ಏಕೆ ಆದಾವು? ಅವು ಮರಗಳು; ಅವುಗಳ ಕೊಂಬೆಗಳೂ ಕಾಣಿಸುವುವಲ್ಲಾ;" ಎಂದು ಹೇಳಿದರು. ಆಗ ಲಿಂಸಿಯಸ್ಸನು ಅತ್ತಕಡೆಗೆ ಚೆನ್ನಾಗಿ ದೃಷ್ಟಿಸಿ ನೋಡಿ—"ಓಹೋ! ಒಳ್ಳೆಯ ಕಂಬಗಳು! ಬಹಳ ಒಳ್ಳೆಯ ಮರಗಳು!!" ಎಂದು ಹೇಳಿ—"ಅಲ್ಲಿ ನಿಂತಿರುವವರೇ ಆರು ಕೈಗಳ ರಾಕ್ಷಸರು; ಅವರು ಯಾರ ಮೇಲೋ ಯುದ್ಧಕ್ಕೆ ಹೊರಡುವಂತಿದೆ" ಎಂದು ಹೇಳಿದನು.

೪೫. ಈ ಮಾತುಗಳನ್ನು ಕೇಳಿ, ಕೂಡಲೆ ಜೇಸನ್ನನು ದೋಣಿಯ ಕಾವಲಿಗಾಗಿ ಹೆರ್ಕ್ಯಾಕ್ಲಿಸ್ಸನೊಡನೆ ಕೆಲವರನ್ನು ಬಿಟ್ಟು, ಕತ್ತಿ, ಗುರಾಣಿ, ಬಿಲ್ಲು ಬತ್ತಳಿಕೆಗಳನ್ನು ಧರಿಸಿ ಮಿಕ್ಕವರೊಡನೆ ಆ ಬೆಟ್ಟದ ಮೇಲಕ್ಕೆ ನುಗ್ಗಿಹೋದನು. ಬೆಟ್ಟದ ಶಿಖರವೇನೋ ಬಹಳ ಸಮೀಪದಲ್ಲಿಯೇ ಇರುವಂತೆ ತೋರುತ್ತಿದ್ದಿತಾದರೂ, ಅಲ್ಲಿಗೆ ಹೋಗಲು ಜೇಸನ್ನಿಗೆ ಒಂದೆರಡು ಗಂಟೆಗಳಷ್ಟು ಹೊತ್ತು ಹಿಡಿಯಿತು. ಈ ಮಧ್ಯದಲ್ಲಿ ಹಡಗಿನ ಬಳಿಯಲ್ಲಿ ಹಿಂದೆ ನಿಂತಿದ್ದ ಕೆಲವರು ತರುಣರು, ರಾಕ್ಷಸರನ್ನು ತಮ್ಮ ಸಂಗಡಿಗರು ಅಣಗಿಸಿಬಿಡುವರೆಂಬ ಧೈರ್ಯದಿಂದ ಸ್ವಲ್ಪ ಸುತ್ತಾಡಿಕೊಂಡು ಬರಲು ಹೊರಟಿದ್ದರು. ಕರ್ತವ್ಯಪರನಾಗ ಹೆರ್ಕ್ಯಾಕ್ಲಸ್ಸನು ದರೋ ದೋಣಿಯ ಹತ್ತಿರವೇ ಎಚ್ಚರದಿಂದ ಕಾವಲಾಗಿದ್ದನು.

೪೬. ಜೇಸನ್ ಮೊದಲಾದವರು ಬೆಟ್ಟವನ್ನು ಹತ್ತಿ ಬರುತ್ತಿದ್ದುದನ್ನು ಆ ರಾಕ್ಷಸರು ಕಂಡು, ಮೊದಲು ಆರ್ಗೋ ದೋಣಿಯನ್ನೂ ಅದರಲ್ಲಿರಬಹುದಾದ ಅಮೂಲ್ಯವಸ್ತುಗಳನ್ನೂ ವಶಪಡಿಸಿಕೊಂಡು, ಬಳಿಕ ತಮ್ಮ ಮೇಲೆ ನುಗ್ಗಿ ಬರುತ್ತಿದ್ದವರನ್ನು ವಿಚಾರಿಸಿಕೊಳ್ಳಬಹುದೆಂದು ಭಾವಿಸಿ, ಬೇರೊಂದು ದಿಕ್ಕಿನಿಂದ ಆರ್ಗೋ ಬಳಿಗೆ ಇಳಿದುಬಂದರು. ಅವರು ತೆಂಗಿನ ಮರಗಳಷ್ಟು ಎತ್ತರವಾಗಿದ್ದುದರಿಂದ, ಸಾಧಾರಣರು ಇಪ್ಪತ್ತು ಹಜ್ಜೆಗಳಲ್ಲಿ ನಡೆಯುವಷ್ಟು ದೂರವನ್ನು ತಮ್ಮ ಒಂದು ದಾಪಿನಲ್ಲಿ ನಡೆಯುತ್ತಿದ್ದರು. ಆದುದರಿಂದ ದೋಣಿಯ ಬಳಿಗೆ ಬರಲು ಅವರಿಗೆ ಬಹಳ ಹೊತ್ತು ಹಿಡಿಯಲಿಲ್ಲ. ಅವರ ಅಸಾಧಾರಣವಾದ ರೂಪನ್ನೂ, ಅವರು ಹಿಡಿದಿದ್ದ ಬಗೆಬಗೆಯ ಶಸ್ತ್ರಗಳನ್ನೂ, ಹಡಗಿನ ಕಡೆಗೆ ಆ ಆಯುಧಗಳನ್ನು ತೋರಿಸಿ ಗಟ್ಟಿಯಾಗಿ ಅರಚುತ್ತಿದ್ದುದನ್ನೂ ಹೆರ್ಕ್ಯಾಕ್ಲಸ್ಸನು ಕಂಡು, ಅವರು ಶತ್ರುಗಳೇ ಸರಿ ಎಂದು ನಿರ್ಧರಿಸಿ ಅವರ ಮೇಲೆ ತನ್ನ ಬಿಲ್ಲಿನಿಂದ ಕೆಲವು ಬಾಣಗಳನ್ನು ಬಿಟ್ಟನು. ಆತನ ಬಿಲ್ಲು ಬಹಳ ದೊಡ್ಡದಾಗಿಯೂ ಬಲವಾಗಿಯೂ ಇದ್ದುದರಿಂದ, ಅದನ್ನು ಇತರರು ಯಾರೂ ಬಾಗಿಸಲಾಗುತ್ತಲೇ ಇರಲಿಲ್ಲ. ದೋಣಿಯಲ್ಲಿದ್ದ ಒಬ್ಬೊಂಟಿಗನನ್ನು ಕಂಡು ಅದನ್ನು ಸುಲಭವಾಗಿ ವಶಪಡಿಸಿಕೊಳ್ಳಬಹುದೆಂದಿದ್ದ ರಾಕ್ಷಸರು ಅವನ ಬಾಣಗಳ ರಭಸವನ್ನು ಕಂಡು, ಅವನ ಎಂಟು ಹತ್ತರಷ್ಟು ಗಾತ್ರವಾಗಿದ್ದ ತಮ್ಮೆಲ್ಲರಮೇಲೆ ಅವನೊಬ್ಬನು ಯುದ್ಧಕ್ಕೆ ನಿಂತನಲ್ಲಾ ಎಂಬ ಕೋಪದಿಂದ, ದೊಡ್ಡ ದೊಡ್ಡ ಬಂಡೆಗಳನ್ನು ಆ ದೋಣಿಯ ಮೇಲೆ ಎತ್ತಿಹಾಕಿ ಅದನ್ನು ಮುಳುಗಿಸಿಬಿಡಬೇಕೆಂದು ನಿಶ್ಚಯಿಸಿ ಬಂಡೆಗಳನ್ನು ಎತ್ತುತ್ತಿದ್ದರು. ಹಡಗಿನಲ್ಲಿದ್ದಿರಬಹುದಾದ ಅಮೂಲ್ಯವಸ್ತುಗಳನ್ನು ವಶಪಡಿಸಿಕೊಳ್ಳಬೇಕೆಂದಿದ್ದ ಇವರ ಉದ್ದೇಶವು ಕೋಪವಶದಿಂದ ಮರೆತೇಹೋಗಿದ್ದಿತು. ಕೋಪವು ಉದ್ದೇಶವನ್ನು ಮರೆಯಿಸಿ ಎಂತೆಂತಹ ಅನರ್ಥಗಳನ್ನೋ ಮಾಡಿಸುವುದಷ್ಟೆ! ಆದರೆ ಹೆರ್ಕ್ಯಾಕ್ಲಸ್ಸನು ಸಾಮಾನ್ಯನಲ್ಲವೆಂದು ಸ್ವಲ್ಪ ಹೊತ್ತಿನಲ್ಲಿಯೇ ಈ ರಾಕ್ಷಸರು ಅರಿತುಕೊಂಡರು. ಬಂಡೆಗಳನ್ನು ದೋಣಿಯ ಮೇಲೆ ಹಾಕಬೇಕೆಂದಿದ್ದ ಅವರ ಮೇಲೆಲ್ಲಾ ಬಾಣಗಳು ಬಿದ್ದುದರಿಂದ ಕೆಲವರು ಬಂಡೆಗಳನ್ನು ಎತ್ತಿಹಾಕಿಕೊಂಡು ಬಿದ್ದು ಆ ಬಂಡೆಗಳ ಕೆಳಗೇ ಅಪ್ಪಚ್ಚಿಯಾದರು; ಇನ್ನು ಕೆಲವರು ತಮ್ಮ ತಮ್ಮ ಬಂಡೆಗಳ ಮೇಲೆಯೇ ಮೂರ್ಛೆಬಿದ್ದರು; ಮತ್ತೆ ಕೆಲವರು, ಬಾಣಗಳು ತಗುಲಿದ್ದರೂ ಲಕ್ಷ್ಯಮಾಡದೆ ಬಂಡೆಗಳನ್ನೇನೋ ಎಸೆದರು; ಆದರೆ ಏಟಿನಿಂದ ಅವರ ಶಕ್ತಿಯು ಕುಗ್ಗಿಹೋಗಿದ್ದ

ಕಾರಣ ಅವು ದೋಣಿಯವರೆಗೆ ಹೋಗಲೇ ಇಲ್ಲ. ಇದನ್ನು ಕಂಡು ರಾಕ್ಷಸರಲ್ಲಿ ಸಾಹಸಿಗಳಾದ ಕೆಲವರು ತಮ್ಮ ಸಾಧಾರಣವಾದ ಆಯುಧಗಳನ್ನೇ ಜಳಪಿಸುತ್ತ ಅರಚುತ್ತ ಮುಂದಮುಂದಕ್ಕೆ ನುಗ್ಗಿಬಂದರು. ನಮ್ಮ ಭೀಮಸೇನನು ಗದಾ ಯುದ್ಧದಲ್ಲಿ ನಿಪುಣನಾಗಿದ್ದಂತೆಯೇ ಹೆರ್ಕ್ಯಾಕ್ಲಸ್ಸನೂ ಗದಾಯುದ್ಧಕುಶಲನಾಗಿ ದ್ದುದರಿಂದ ತನ್ನ ಬಳಿಗೆ ಬಂದ ಅನೇಕರಿಗೆ ತನ್ನ ಗದೆಯ ಏಟಿನ ರುಚಿಯನ್ನು ತೋರಿಸುತ್ತಿದ್ದನು. ಆದರೆ ಒಬ್ಬನು ಎಷ್ಟು ಹೊತ್ತಿನವರೆಗೆತಾನೇ ಅನೇಕ ಪ್ರಬಲ ಶತ್ರುಗಳ ಮೇಲೆ ಕಾದಾಡುವುದು ಸಾಧ್ಯವು! ಹೆರ್ಕ್ಯಾಕ್ಲಸ್ಸಿಗೂ ಬಲವು ಕುಗ್ಗು ತ್ತಿದ್ದಿತು; ರಾಕ್ಷಸರ ಉತ್ಸಾಹವು ಹೆಚ್ಚುತ್ತಿದ್ದಿತು; ಅವರ ಗರ್ಜನೆಯೂ ಕ್ಷಣ ಕ್ಷಣಕ್ಕೂ ಪ್ರಬಲವಾಗುತ್ತಿದ್ದಿತು.

೪೭. ಆದರೆ ಇಂತಹ ಬಿಗಿಕಟ್ಟಿನ ಸಂದರ್ಭಗಳಲ್ಲಿ ಎದೆಗೆಡದೆ ಸಾಹಸ ಮಾಡುವವರನ್ನು ದೇವರು ಕೈಬಿಡುವುದಿಲ್ಲವೆಂಬುದಕ್ಕೆ ನಿದರ್ಶನವಾಗಿಯೋ ಎಂಬಂತೆ, ಸುತ್ತಿಕೊಂಡುಬರಲು ಹೋಗಿದ್ದ ನಾವಿಕರು ದೋಣಿಯ ಬಳಿ ನಡೆ ಯುತ್ತಿದ್ದ ಕೋಲಾಹಲವನ್ನು ಕೇಳಿ ಅದರ ರಕ್ಷಣೆಗಾಗಿ ಬಂದುಕಡೆಯಿರದ ನುಗ್ಗಿಬಂದರು; ಜೇಸರ್ ಮೊದಲಾದವರು ಮತ್ತೊಂದು ಕಡೆಯಿಂದ ನುಗ್ಗಿ ಬಂದರು ಈ ಕಾರಣದಿಂದ ಕತ್ತರಿಗೆ ಸಿಕ್ಕಿದ ಇಲಿಯಂತೆ ಸ್ವಲ್ಪ ಹೊತ್ತಿನಲ್ಲಿಯೇ ಆ ರಾಕ್ಷಸರ ಪಾಡೂ ಆಯಿತು. ಹೀಗೆ ರಾಕ್ಷಸರೆಲ್ಲರನ್ನೂ ನದೆಬಡಿದುದನ್ನು ಆ ದ್ವೀಪನಿವಾಸಿಗಳು ಅರಿಯರು. ಜೇಸರ್ ಮೊದಲಾದವರು ಬೆಟ್ಟವನ್ನು ಹತ್ತಿ ಹೋಗಿದ್ದ ದಿಕ್ಕಿನ ಕಡೆಯೇ ಆ ನಿವಾಸಿಗಳೆಲ್ಲರೂ ಕುತೂಹಲದಿಂದ ನೋಡು ತ್ತಿದ್ದುದೇ ಇದಕ್ಕೆ ಕಾರಣವು. ಈ ಮಧ್ಯದಲ್ಲಿ ಆರ್ಗೋ ನಾವಿಕರಲ್ಲೊಬ್ಬನು ಬೇರೊಂದು ದಿಕ್ಕಿನಿಂದ ಬಂದು, ರಾಕ್ಷಸರು ಧ್ವಂಸವಾದರೆಂದು ತಿಳಿಸಿದಾಗ, ಸಿಜಿಕಸ್ ಮೊದಲಾದವರಿಗೆ ಅತ್ಯಂತಾಶ್ಚರ್ಯವಾಯಿತು. ಆದುದರಿಂದ ಅವರೆಲ್ಲರೂ ಹಡಗಿನಬಳಿಗೆ ಬಂದು ಅಲ್ಲಿ ಸತ್ತುಬಿದ್ದಿದ್ದ ರಾಕ್ಷಸರನ್ನು ಕಂಡು ಅತ್ಯಾನಂದ ಪಟ್ಟರು. ಸಿಜಿಕಸ್ಸನು ಅವರೆಲ್ಲರನ್ನೂ ಮರ್ಯಾದೆಯಿಂದ ಅರಮನೆಗೆ ಕರೆತಂದು ಪುನಃ ಔತಣಗಳನ್ನು ಬಹು ವಿಜೃಂಭಣೆಯಿಂದ ಮಾಡಿಸಿ ತನ್ನ ಮದುವೆಗಾಗಿ ಅಲ್ಲಿಯೇ ಮತ್ತೆ ಕೆಲವು ದಿವಸಗಳಿದ್ದು ಮುಂದಕ್ಕೆ ಪ್ರಯಾಣವನ್ನು ಮಾಡ ಬೇಕೆಂದು ಅವರನ್ನು ಎಷ್ಟೋ ಕೇಳಿಕೊಂಡನು. ಆದರೆ ಲೆಮ್ನಾಸಿನ ಅನುಭವ ವಿದ್ದ ಆರ್ಗೋನಾವಿಕರಿಗೆ, ಪುನಃ ಸುಖಮಗ್ನರಾಗುವುದರಿಂದ ತಮ್ಮ ಉದ್ದೇಶ ಕ್ಕೆ ಭಂಗಬಂದೀತೆಂಬ ಶಂಕೆಯು ಬಾಧಿಸುತ್ತಿದ್ದ ಕಾರಣ, ಅವರು ಸಿಜಿಕಸ್ಸಿಗೆ ಸಮಾಧಾನಹೇಳಿ ಆತನ ಅಪ್ಪಣೆಯನ್ನು ಪಡೆದು ಮುಂದಕ್ಕೆ ಪಯಣಹೊರಟರು.



# ಎಂಟನೆಯ ಪ್ರಕರಣ.

## ಒಂದು ಘೋರಕೃತ್ಯವೂ ಪ್ರಾಯಶ್ಚಿತ್ತವೂ.

೪೮. ಆಗೊರ್ಗ ದೋಣಿಯು ಪಯಣಹೊರಟಾಗ ಆಕಾಶವು ಬಹು ನಿರ್ಮಲವಾಗಿದ್ದಿತು. ಎಕ್ಕಿದ ಅರಳೆಯಂತೆ ವಿರಳವಿರಳವಾಗಿ ಆಕಾಶದಲ್ಲಿ ತೋರು ತ್ತಿದ್ದ ಬಿಳಿಯ ಮುಗಿಲುಗಳು ಪೂರ್ವದಿಂದ ಪಶ್ಚಿಮಕ್ಕೆ ಹೋಗುತ್ತಿದ್ದುವು. ಕೆಲವು ಪಕ್ಷಿಗಳು ಸಂತೋಷದಿಂದ ಕೂಗುತ್ತಿದ್ದಂತೆ ಕಂಡುಬಂದರೂ, ಮತ್ತು ಕೆಲವು ಮಾತ್ರ ವಿಕಾರವಾಗಿ ಧ್ವನಿಮಾಡುತ್ತಿದ್ದುವು. ನಾವಿಕರಲ್ಲಿ ಮಾಪ್ಸಸ್ ಎಂಬವ ನೊಬ್ಬನಿಗೆ ಪಕ್ಷಿಗಳ ಭಾಷೆಯು ತಿಳಿದಿದ್ದ ಕಾರಣ, ಅವನು ತಮಗೆ ಯಾವುದೋ ಒಂದು ಕೆಡಕು ಸನ್ನಿಹಿತವಾಗಿದೆಯೆಂದು ಜೇಸನ್ನಿಗೂ ಹೆರ್ಕ್ಯಾಕ್ಲಿಸ್ಸಿಗೂ ತಿಳಿಸಿ ದನು. ಆಗೊರ್ಗನಾವಿಕರಲ್ಲಿ ಇಡ್ಮನ್ ಎಂಬಾತನಿಗೆ ನಮ್ಮ ಸಹದೇವನಂತೆ ಭವಿಷ್ಯ ಜ್ಞಾನವಿದ್ದುದರಿಂದ, ಅವನೂ ತಮಗೆ ಏನೋ ಅಪಾಯವು ಸನ್ನಿಹಿತವಾಗಿರುವು ದೆಂದು ತನ್ನ ಸಂಗಡಿಗರಿಗೆ ತಿಳಿಸಿದನು. ಆದರೆ ಆ ನಾವಿಕರೆಲ್ಲರೂ ಅಪಾಯಕರ ವಾದ ಕಾರ್ಯವನ್ನೇ ಸಾಧಿಸಲು ಹೊರಟಿದ್ದುದರಿಂದಲೂ, ಆಗತಾನೇ ರಾಕ್ಷಸ ರನ್ನು ಜಯಿಸಿದ್ದುದರಿಂದಲೂ, ಆ ಇಬ್ಬರು ನಾವಿಕರ ಮಾತುಗಳನ್ನು ಲಕ್ಷ್ಯ ಮಾಡದೆ, ಉತ್ಸಾಹದಿಂದ ದೋಣಿಯನ್ನು ನಡೆಯಿಸಿಕೊಂಡು ಹೊರಟರು. ಮೊದಲನೆಯ ದಿನದ ಪ್ರಯಾಣವು ಸುಖವಾಗಿ ಜರುಗಿತು.

೪೯. ಎರಡನೆಯ ದಿನದ ಪ್ರಯಾಣವು ಮೊದಮೊದಲಿನಲ್ಲಿ ಸುಖಕರ ವಾಗಿ ನಡೆದರೂ, ಪ್ರತಿಕೂಲಮಾರುತಗಳು ರಭಸದಿಂದ ಬೀಸತೊಡಗಿದವು. ಸಮುದ್ರವು ಉಲ್ಲೋಲಕಲ್ಲೋಲವಾಯಿತು , ಮಳೆಯೂ ಬಲವಾಗಿ ಹೊಯ್ಯತೊ ಡಗಿತು. ಐವತ್ತುಮಂದಿ ನಾವಿಕರಲ್ಲಿ ಒಬ್ಬನಾದರೂ ತನ್ನ ಹುಟ್ಟನ್ನು ಬಿಟ್ಟು ಬಿಟ್ಟರೆ ದೋಣಿಯು ಮುಳುಗಿಹೋಗುವಂತಿದ್ದಿತು. ಅಂತಹ ಅನುಭವವನ್ನು ಆ ನಾವಿಕರು ಆ ವರೆಗೆ ಯಾವಾಗಲೂ ಕಂಡಿರಲಿಲ್ಲ. ಒಬ್ಬರೊಡನೊಬ್ಬರು ಮಾತ ನಾಡಬೇಕೆಂದರೆ, ಹೆರ್ಕ್ಯಾಕ್ಲಿಸ್ಸನ ಗರ್ಜನೆಯೂ ಕೇಳಿಸುವಂತಿರಲಿಲ್ಲ. ಅವನೂ ಜೇಸನ್ನನೂ ಎಷ್ಟೋಸಾರಿ ಆರ್ಫಿಯಸ್ಸನ್ನು ಕುರಿತು—"ನಿನ್ನ ವೀಣೆಯನ್ನು ನುಡಿಸು! ಇದೇಕೆ ಹೀಗೆ ಸುಮ್ಮನಿರುವೆ?" ಎಂದು ಅರಚಿಕೊಂಡಿದ್ದರು. ದೋಣಿ

ಯಲ್ಲಿದ್ದ ಬೊಂಬೆಯನ್ನಾದರೂ ಕೇಳಿ ತಿಳಿದುಕೊಳ್ಳುವವೆಂದರೆ ಸ್ಥಳಬಿಟ್ಟು ಕದಲಿದಾಗ ದೋಣಿಯು ಮುಳುಗಿಹೋಗುವುದೆಂಬ ಹೆದರಿಕೆ. ಇಷ್ಟರಲ್ಲಿ ಕತ್ತಲೂ ಕವಿದುಕೊಂಡಿತು. ಅಂತೂ ಆರ್ಗೋನಾವೆಗೆ ಬಲವಾದ ಕಷ್ಟವೊದಗಿತು. ಈ ಚಂಡಮಾರುತವು ಎರಡುದಿನಗಳವರೆಗೂ ಎಡೆಬಿಡದೆ ಬೀಸುತ್ತಿದ್ದುದರಿಂದ ನಾವಿಕರಿಗೆ ತಾವು ಯಾವದಿಕ್ಕಿನಲ್ಲಿ ಪಯಣಮಾಡುತ್ತಿರುವೆವೆಂಬುದೂ ತಿಳಿಯಲಿಲ್ಲ. ಅಷ್ಟು ಕಾಲವೂ ಒಂದು ಸಣ್ಣ ದ್ವೀಪವಾದರೂ ಲಿಂಸಿಯಸ್ಸಿನ ದೃಷ್ಟಿಗೂ ಗೋಚರವಾಗಲಿಲ್ಲ.

೫೦. ಕಡೆಗೆ ಆ ದೋಣಿಯು ಒಂದು ಭೂಪ್ರದೇಶವನ್ನು ಸಮೀಪಿಸಿತು. ಆದರೆ ಅಂತಹ ಬಿರುಮಳೆಗಾಳಿಗಳಲ್ಲಿಯೂ ಆ ಸಮುದ್ರತೀರದಲ್ಲಿ ಆಯುಧಪಾಣಿಗಳಾಗಿದ್ದ ಜನರು ನಿಂತಿದ್ದುದು ಕಂಡುಬಂದಿತು. ದೋಣಿಯನ್ನು ಸಮುದ್ರತೀರಕ್ಕೆ ತರಲು ಟಿಫಿಸ್ಸನೂ ಇತರ ನಾವಿಕರೂ ತಮ್ಮ ಸರ್ವಸಾಹಸವನ್ನೂ ಪ್ರಯೋಗಿಸಬೇಕಾಯಿತು. ಸಮುದ್ರದ ಪಾಲಾಗುತ್ತಿದ್ದುದು ತಪ್ಪಿತಲ್ಲಾ ಎಂದು ಅವರು ಮನಸ್ಸಿನಲ್ಲಿಯೇ ಸಂತೋಷಪಟ್ಟುಕೊಳ್ಳುತ್ತಿದ್ದಾಗ, ಸಮುದ್ರತೀರದಲ್ಲಿದ್ದ ಯೋಧರು ಅವರೊಡನೆ ಯುದ್ಧಕ್ಕೆ ತೊಡಗಿದರು. ಆರ್ಗೋನಾವಿಕರು, ತಾವು ಯಾರೆಂಬುದನ್ನು ತಿಳಿಸಿದರೂ ಆ ಬಿರುಗಾಳಿಯಲ್ಲಿ ಅವರ ಮಾತುಗಳು ಇದಿರುಪಕ್ಕದವರಿಗೆ ಕೇಳಿಸದೆ ಹೋಗಿ, ಬಲವಾದ ಯುದ್ಧವು ಮೊದಲಾಯಿತು. ಆದುದರಿಂದ ನಾವಿಕರೂ ಆತ್ಮರಕ್ಷಣೆಗಾಗಿ ಯುದ್ಧಮಾಡಬೇಕಾಯಿತು. ಯುದ್ಧವೂ ಘೋರವಾಗಿ ನಡೆದು ಶೂರರಾದ ಆ ನಾವಿಕರಲ್ಲಿ ಕೆಲವರಿಗೆ ದೊಡ್ಡ ದೊಡ್ಡ ಗಾಯಗಳಾದುವು. ಇದಿರುಪಕ್ಕದವರಲ್ಲಿ ಅನೇಕರು ಸತ್ತುಬಿದ್ದರು. ಕಡೆಗೆ ನಾವಿಕರಿಗೇ ಜಯವಾಯಿತು. ಇಷ್ಟುಹೊತ್ತಿಗೆ ಸ್ವಲ್ಪಸ್ವಲ್ಪವಾಗಿ ಬಿರುಗಾಳಿಯು ಶಮನವಾಗುತ್ತಬಂದು ಬೆಳಕು ತಲೆದೋರಿತು.

೫೧. ಆ ಸಮಯದಲ್ಲಿ ಊರಿನಿಂದ ಆ ಸಮುದ್ರತೀರಕ್ಕೆ ಕೆಲವರು ಹೆಂಗುಸರುಮಕ್ಕಳು ಅಳುತ್ತಬಂದರು. ಅವರಲ್ಲಿ ಮುಂದಾಳಾಗಿದ್ದವಳು ಕಿರೀಟವನ್ನು ಧರಿಸಿದ್ದುದರಿಂದ ಆಕೆಯು ರಾಣಿಯೆಂದು ತೋರುತ್ತಿದ್ದಿತು. ಅವರೆಲ್ಲರೂ ಬಂದು ಗೋಳಾಡುತ್ತ ಜಯಶಾಲಿಗಳಾಗಿದ್ದ ನಾವಿಕರನ್ನು ಕುರಿತು ತಮ್ಮನ್ನು ಬಾಧಿಸದಿರುವಂತೆ ಬೇಡಿಕೊಂಡರು. ಅವರು ಯಾರೆಂಬುದನ್ನು ವಿಚಾರಿಸಲು ಆ ರಾಣಿಯು ಸಿಜಿಕಸ್ಸಿನ ನೂತನವಧುವೆಂದೂ, ಯುದ್ಧದಲ್ಲಿ ಮಡಿದುಹೋದವರಲ್ಲಿ ಸಿಜಿಕಸ್ಸನೂ ಒಬ್ಬನೆಂದೂ ತಿಳಿಯಿತು. ಅಂತಹ ಬಿರುಗಾಳಿಗಳ ಸಮಯವನ್ನೇ

ಸಿರೀಕ್ಷಿಸಿಕೊಂಡಿರುತ್ತಿದ್ದ ಕೆಲವರು ಸಮುದ್ರದ ಕಳ್ಳರು, ಆಗಾಗ ಅಲ್ಲಿಗೆ ಬಂದು ಹಾವಳಿಯನ್ನು ಮಾಡುತ್ತಿದ್ದುದರಿಂದ, ಆ ದ್ವೀಪನಿವಾಸಿಗಳು ನಾವಿಕರನ್ನು ಸಮುದ್ರಚೋರರೆಂದು ಭಾವಿಸಿ ಅವರೊಡನೆ ಕಾದಾಡಿ ಮಡಿದುಹೋಗಿದ್ದರೆಂದು ತಿಳಿಯಬಂದಿತು. ಈ ವೃತ್ತಾಂತಗಳೆಲ್ಲವನ್ನೂ ಕೇಳಿ ಆರ್ಗೋನಾವಿಕರು ಪಟ್ಟ ಪಶ್ಚಾತ್ತಾಪವನ್ನು ಹೇಳತೀರದು. ಅವರು ತಮ್ಮ ಆ ಘೋರವಾದ ಚಿಂತೆಯಲ್ಲಿ ಮುಂದೆ ಏನು ಮಾಡಬೇಕೆಂಬುದನ್ನೂ ಸಹ ಮರೆತುಬಿಟ್ಟರು.

೫೨. ಜೇಸನ್ನನು ಆಗ ತನ್ನ ಮನಸ್ಸಿನಲ್ಲಿಯೇ ಬಹಳವಾಗಿ ಶೋಕಿಸುತ್ತ ಹಡಗಿನ ಬೊಂಬೆಯ ಸಮೀಪಕ್ಕೆ ಹೋಗಿ ಅದಕ್ಕೆ ಸಮಸ್ಕರಿಸಿ ತಮ್ಮ ಆ ಪಾಪವನ್ನು ಹೋಗಲಾಡಿಸಿಕೊಳ್ಳುವುದಕ್ಕೆ ಏನುಮಾಡಬೇಕೋ ಅದನ್ನು ಅಪ್ಪಣೆಕೊಡಿಸಬೇಕೆಂದು ಪ್ರಾರ್ಥಿಸಿಕೊಂಡನು. ಆಗ ಆ ಬೊಂಬೆಯು ಅವನನ್ನು ಕುರಿತು— " ಇದು ದೈವೇಚ್ಛೆಯಿಂದ ಆದುದು ; ನೀವು ಸಿಜಿಕಸ್ಸಿನ ಉತ್ತರಕ್ರಿಯೆಗಳಲ್ಲಿ ಭಕ್ತಿಯಿಂದ ಭಾಗಿಗಳಾಗಿದ್ದುಕೊಂಡು, ಡಿಂಡಿಮಪರ್ವತದ ದೇವಿಯನ್ನು ಆರಾಧಿಸಿ " ಎಂದು ಹೇಳಿತು. ದೈವೇಚ್ಛೆಗೆ ವಿರೋಧವಾಗಿ ನಡೆಯಲು, ಆರ್ಗೋನಾವಿಕರಲ್ಲಿ ಪ್ರಸಿದ್ಧವೈದ್ಯನಾಗಿದ್ದ ಏಸ್ಕ್ಯುಲೇಪಿಯಸ್ಸಿಗೂ ಧೈರ್ಯವಿರಲಿಲ್ಲ. ಆದುದರಿಂದ ಅದೇ ಮೇರೆಗೆ ಆ ನಾವಿಕರೆಲ್ಲರೂ ಉತ್ತರಕ್ರಿಯೆಗಳನ್ನು ನೆರವೇರಿಸಿ, ಸಮೀಪದಲ್ಲಿದ್ದ ಡಿಂಡಿಮಪರ್ವತದ ಮೇಲೆ ನೆಲೆಸಿದ್ದ ದೇವತೆಯನ್ನು ಭಕ್ತಿಯಿಂದ ಆರಾಧಿಸಿ, ಸಿಜಿಕಸ್ಸಿನ ನಿವಾಸಿಗಳ ಕ್ಷಮಾಪಣೆಯನ್ನು ಮತ್ತೊಮ್ಮೆ ಕೇಳಿಕೊಂಡು ದುಃಖದಿಂದ ಮುಂದಕ್ಕೆ ಪಯಣಹೊರಟರು. ಇತ್ತ, ಸಿಜಿಕಸ್ಸಿನ ಹೆಂಡತಿಗೆ ಯಾರು ಎಷ್ಟು ಸಮಾಧಾನಹೇಳಿದರೂ ದುಃಖಶಮನವಾಗಲಿಲ್ಲ. ಅವಳ ದಾರುಣವಾದ ದುಃಖವನ್ನು ದೇವತೆಗಳು ಕಂಡು ಕರುಣೆಯಿಂದ ಅವಳನ್ನು ತಮ್ಮ ಸನ್ನಿಧಿಗೆ ಕರೆಯಿಸಿಕೊಂಡರಂತೆ ! ಅವಳು ಅದೃಶ್ಯಳಾಗಿ ಹೋದ ಪ್ರದೇಶದಲ್ಲಿ ಅವಳ ಕಣ್ಣೀರಿನಿಂದಲೇ ಒಂದು ಚಿಲುಮೆಯು ಉದ್ಭವವಾಯಿತೆಂದು ಆ ಪ್ರಾಂತದ ಜನರು ಬಹುಕಾಲದವರೆಗೂ ಹೇಳಿಕೊಳ್ಳುತ್ತಿದ್ದರು.



# ಒಂಬತ್ತನೆಯ ಪ್ರಕರಣ.

## ನಾವಿಕರಿಗೆ ಹೆರ್ಕ್ಯಾಕ್ಲಿಸ್ಸಿನ ಸಾಹಾಯ್ಯವು ತಪ್ಪಿದುದು.

೫೩. ದೋಣಿಯು ಬಿರುಗಾಳಿಯಲ್ಲಿ ಸಿಕ್ಕಿದಾಗ ಅದರ ನಾವಿಕರೆಲ್ಲರೂ ತಮ್ಮ ಶಕ್ತಿಯನ್ನೆಲ್ಲಾ ಉಪಯೋಗಿಸಿ ಅದನ್ನು ನಡೆಯಿಸಬೇಕಾಗಿದ್ದುದರಿಂದ, ಅವರು ಹುಟ್ಟುಗಳನ್ನು ಬಹಳ ರಭಸದಿಂದ ಹೊಡೆಯುತ್ತಿದ್ದರು. ಇದರಿಂದ ಅವು ಬಿಲ್ಲಿನಂತೆ ಬಾಗುತ್ತಿದ್ದುವು. ಹೆರ್ಕ್ಯಾಕ್ಲಿಸ್ಸಿನ ಹುಟ್ಟು ಮಿಕ್ಕವರ ಹುಟ್ಟುಗಳಿಗಿಂತ ದಪ್ಪವಾಗಿದ್ದುದರಿಂದಲೂ, ಅವನು ಅದನ್ನು ಬಿರುಗಾಳಿಯಲ್ಲಿ ತನ್ನ ಶಕ್ತಿಯೆಲ್ಲವನ್ನೂ ಪ್ರಯೋಗಿಸಿ ಆಡಿಸುತ್ತಿದ್ದುದರಿಂದಲೂ, ಅದು ಆಗಲೇ ಸ್ವಲ್ಪ ಸೀಳಿಹೋಗಿದ್ದಿತು. ಆರ್ಗೋನಾವೆಯು ಸಿಜಿಕಸ್‌ದ್ವೀಪದಿಂದ ಹೊರಟ ಮೂರನೆಯ ದಿನದ ಮಧ್ಯಾಹ್ನಸಮಯದಲ್ಲಿ ಹೆರ್ಕ್ಯಾಕ್ಲಿಸ್ಸಿನ ಹುಟ್ಟು ಮುರಿದೇಹೋಯಿತು. ತನ್ನ ಜೊತೆಯವರು ಕಷ್ಟಪಡುತ್ತಿದ್ದಾಗ ತಾನು ಸುಮ್ಮನೆ ಕುಳಿತಿರುವುದಕ್ಕೆ ಹೆರ್ಕ್ಯಾಕ್ಲಿಸ್ಸನು ಸ್ವಲ್ಪವೂ ಸಮ್ಮತಿಸದಿದ್ದುದರಿಂದಲೂ ಮತ್ತೆ ಯಾರಹುಟ್ಟೂ ಅವನ ಕೈಗಳಿಗೆ ಸರಿಬೀಳದಿದ್ದುದರಿಂದಲೂ, ನಾವಿಕರು ಆ ದಿನ ಇನ್ನೂ ತಂಗುವ ಹೊತ್ತಾಗದಿದ್ದರೂ ತಮ್ಮ ದೋಣಿಯನ್ನು ಹೊತ್ತಿಗೆ ಮುಂಚೆಯೇ ತೀರಕ್ಕೆ ತಂದರು.

೫೪. ದೋಣಿಯು ನಿಂತಕೂಡಲೆ ಹೆರ್ಕ್ಯಾಕ್ಲಿಸ್ಸನು ಹುಟ್ಟಿನ ಮರವನ್ನು ಹುಡುಕಿಕೊಂಡು ಹೊರಡಲು ಅವನ ಹಿಂದೆಯೇ ಹೈಲಾಸನೂ ಹೊರಟನು. ನಾವಿಕರಲ್ಲಿ ಉಳಿದ ಕೆಲವರು ದೋಣಿಯಲ್ಲಿಯೇ ನಿಂತು ಸಿಜಿಕಸ್ಸಿನಲ್ಲಿ ನಡೆದ ಅಸಂಗತವನ್ನು ಕುರಿತು ಮಾತನಾಡಿಕೊಳ್ಳುತ್ತಿದ್ದರು. ಮತ್ತೆ ಕೆಲವರು ಸಮುದ್ರತೀರದಲ್ಲಿ ಸುತ್ತಾಡಿಕೊಂಡು ಬರಲು ಜೇಸನ್ನಿನ ಅಪ್ಪಣೆಯನ್ನು ಪಡೆದು ಹೊರಟರು; ಇನ್ನೂ ಕೆಲವರು ರಾತ್ರಿಯಲ್ಲಿ ನಾವಿಕರ ಹಾಸಿಗೆಗಳಿಗಾಗಿ ಹುಲ್ಲನ್ನೂ, ಅಡಿಗೆಗಾಗಿ ಒಣಸೌದೆಯನ್ನೂ ತರಲು ಹೊರಟರು.

೫೫. ಹುಟ್ಟಿಗೆ ಬೇಕಾದ ಮರವು ಹೆರ್ಕ್ಯಾಕ್ಲಿಸ್ಸಿಗೆ ಸುಲಭವಾಗಿ ಸಿಕ್ಕಲಿಲ್ಲ. ಕಡೆಗೆ ಸೂರ್ಯಾಸ್ತಮಯಸಮಯದಲ್ಲಿ ಅವನ ಮನಸ್ಸಿಗೆ ಒಪ್ಪಿದ ಒಂದು ಎಳೆಯ ಗಿಡವು ಗೋಚರವಾಯಿತು. ಅವನು ತನ್ನ ಗದೆಯಿಂದ ಅದರ ದಪ್ಪ ಕೊಂಬೆಗಳನ್ನು ಬಡಿದು ಕೆಡಹಿ ಸಣ್ಣಸಣ್ಣ ಕೊಂಬೆಗಳನ್ನು ಕೈಯಿಂದಲೇ ಮುರಿದು

ಹಾಕಿದನು. ಕಡೆಗೆ ಆ ಬೋಳುಗಿಡವನ್ನು ಭೂಮಿಯಿಂದ ಕಿತ್ತು ಬೇರುಗಳನ್ನು ತೆಗೆದುಹಾಕುವ ಕೆಲಸವು ಮಾತ್ರ ಉಳಿಯಿತು. ಬುಡದ ನೆಲವನ್ನು ಮಿದುಮಾಡಿಕೊಳ್ಳುವುದಕ್ಕಾಗಿ ತನ್ನ ಗದೆಯಿಂದ ಗಿಡದ ಸುತ್ತಲೂ ಬಡಿದು ಗಿಡವನ್ನು ಬಲವಾಗಿ ತಬ್ಬಿ ಮೇಲಕ್ಕೆ ಎತ್ತಲು ಯತ್ನಿಸಿದನು. ಆದರೆ ಆ ಕೆಲಸವೂ ಅಷ್ಟು ಸುಲಭವಾಗಿರಲಿಲ್ಲ. ಆದರೂ ಸ್ವಲ್ಪಕಾಲ ಪ್ರಯತ್ನಿಸಿದಮೇಲೆ ಆ ಗಿಡವು ಬುಡಸಹಿತವಾಗಿ ಬಂದುಬಿಟ್ಟಿತು. ಅದರ ಬೇರುಗಳನ್ನು ಮುರಿದು ಗಿಡದ ಮುಂಡವನ್ನು ಸರಿಪಡಿಸಿಕೊಳ್ಳುವ ಹೊತ್ತಿಗೆ ಕತ್ತಲೆಯು ಸುಮಾರಾಗಿ ಕವಿದುಕೊಂಡಿದ್ದಿತು.

೫೬. ಈ ನಡುವೆ ಹೈಲಾಸನು ತಾನು ತಂದಿದ್ದ ಬುತ್ತಿಯನ್ನು ಹೆರ್ಕ್ಯಾಕ್ಲಸ್ಸನು ಕೆಲಸಮಾಡುತ್ತಿದ್ದ ಬಳಿಯಿದ್ದ ಒಂದು ಮರದ ರೆಂಬೆಗೆ ಕಟ್ಟಿ ಕೈಕಾಲುಗಳನ್ನು ತೊಳೆದುಕೊಳ್ಳುವುದಕ್ಕೂ ಕುಡಿಯುವುದಕ್ಕೂ ನೀರನ್ನು ತೆಗೆದುಕೊಂಡು ಬರುವುದಕ್ಕಾಗಿ ಕಂಚಿನ ಒಂದು ಹೂಜಿಯನ್ನು ಹಿಡಿದುಕೊಂಡು ನೀರಿನ ಬಳಿಗೆ ಹೊರಟಿದ್ದನು. ಅವನು ರಾಜಪುತ್ರನಾಗಿದ್ದರೂ ಕೆಲಸದ ವಿಷಯದಲ್ಲಿ ಹಿಂದೆಗೆಯುತ್ತಿರಲಿಲ್ಲ. ವರ್ಧಿಷ್ಣುವಾದ ಯಾವ ಶ್ರೀಮಂತನು ತಾನೇ ಆಳುಗಳಿಲ್ಲದಿರುವಾಗಲೂ "ಇಂತಹ ಕೆಲಸವು ನನ್ನ ಪದವಿಗೆ ಕೀಳಾದುದು; ಇದನ್ನು ಆಳುಗಳೇ ಮಾಡಬೇಕು" ಎಂದು ಪಾಲುಮಾರುವನು? ಆದುದರಿಂದ ಹೈಲಾಸನು ತಾನೇ ನೀರನ್ನು ಹುಡುಕಿಕೊಂಡು ಬಹಳ ಸುತ್ತಾಡಿ ಕಡೆಗೆ ಒಂದು ಚಿಲುಮೆಯ ಬಳಿಗೆ ಬಂದನು. ನೀರು ಮಧ್ಯಪ್ರದೇಶದಲ್ಲಿ ಬಹಳ ನಿರ್ಮಲವಾಗಿದ್ದರೂ ಅದರ ಸುತ್ತಲೂ ಜೊಂಡು ಬೆಳೆದುಕೊಂಡಿದ್ದಿತು. ಚಿಲುಮೆಯ ಮಧ್ಯದಲ್ಲಿ ಒಂದು ಬಂಡೆಯು ಇದ್ದುದರಿಂದ ಅದನ್ನು ಹತ್ತಿ ಅದರ ಮೇಲಣಿಂದ ನೀರನ್ನು ಮೊಗೆದುಕೊಳ್ಳಬೇಕೆಂದು ಹೈಲಾಸನು ಪಾತ್ರೆಯನ್ನು ಸಿದ್ಧಪಡಿಸಿಕೊಳ್ಳುತ್ತಿದ್ದಾಗ ಆ ನೀರಿನಲ್ಲಿ ಕೆಲವು ಸುಂದರಮುಖಗಳು ಕಾಣಿಸಿದುವು. ಹಾಗೆಯೇ ಕುತೂಹಲದಿಂದ ನೋಡುತ್ತಿದ್ದಾಗ, ಆ ಜಲಕನ್ನಿಕೆಯರು ಹೈಲಾಸನ್ನು ತಾವು ಇದ್ದಲ್ಲಿಗೆ ಬರುವಂತೆ ಸನ್ನೆ ಮಾಡುವಹಾಗೆ ಕಂಡಿತು. ಇನ್ನೂ ಸ್ವಲ್ಪಹೊತ್ತಾದಮೇಲೆ ಆ ಜಲಕನ್ನಿಕೆಯರು ಹೈಲಾಸನ ಕೈಗಳನ್ನು ಹಿಡಿದುಕೊಂಡು ತಾವು ಇದ್ದಲ್ಲಿಗೆ ಬಲಾತ್ಕಾರದಿಂದ ಎಳೆದುಕೊಂಡುಬಿಟ್ಟರು. ತನ್ನನ್ನು ಬಿಡಬೇಕೆಂದು ಅವನು ಎಷ್ಟು ಕೇಳಿಕೊಂಡರೂ ಅವರು ಬಿಡಲಿಲ್ಲ.

೫೭. ಇತ್ತ ಹೆರ್ಕ್ಯಾಕ್ಲಸ್ಸನು ತನ್ನ ಕೆಲಸವನ್ನು ಮುಗಿಸಿದಕೂಡಲೆ ತನ್ನೊಡನೆ ಬಂದಿದ್ದ ಹೈಲಾಸನ್ನು ನೆನೆದುಕೊಂಡು ಸುತ್ತಲೂ ನೋಡಿದನು.

ಮರಕ್ಕೆ ತೂಗಹಾಕಿದ್ದ ಬುತ್ತಿಯುಮಾತ್ರ ಕಣ್ಣಿಗೆ ಗೋಚರವಾಯಿತು. ನೀರನ್ನು ತರಲು ಅವನು ಹೋಗಿರಬಹುದೆಂದು ಭಾವಿಸಿ "ಹೈಲಾಸ್! ಹೈಲಾಸ್!" ಎಂದು ಗಟ್ಟಿಯಾಗಿ ಕೂಗಿದನು. ಉತ್ತರವೇ ಬರಲಿಲ್ಲ. ಅವನ ಹೆಸರನ್ನು ಹಿಡಿದು ಪುನಃ ಪುನಃ ತನ್ನ ಶಕ್ತಿಯೆಲ್ಲವನ್ನೂ ಉಪಯೋಗಿಸಿ ಅರಚಿದನು. ಆದರೂ ಯಾವ ಪ್ರತ್ಯುತ್ತರವೂ ಬರಲಿಲ್ಲ. ಈ ಕೂಗನ್ನು ಜಲಕನ್ನಿಕೆಯರ ಕೈಗೆ ಸಿಕ್ಕಿದ್ದ ಹೈಲಾಸನು ಕೆಲವುಸಾರಿ ಕೇಳಿ, ಪ್ರತಿಯೊಂದುಬಾರಿಯೂ "ಚಿಲುಮೆಯೊಳಗೆ ಮುಳುಗಿಕೊಂಡಿರುವೆನು! ಬಿಡಿಸು! ನನ್ನನ್ನು ಬಿಡಿಸು!" ಎಂದು ಕೂಗಿಕೊಂಡನು. ಆದರೆ ಬಾವಿಗೆ ಇಳಿದಿರುವವರ ಧ್ವನಿಯಂತೆ ಅಸ್ಪಷ್ಟವಾಗಿದ್ದ ಹೈಲಾಸಿನ ಉತ್ತರವೂ ಬಹುದೂರದಲ್ಲಿದ್ದ ಹೆರ್ಯಾಕ್ಲಸ್ಸಿಗೆ ಕೇಳಿಸಲೇ ಇಲ್ಲ.

೫೮. ಹೈಲಾಸಿನಮೇಲೆ ಹೆರ್ಯಾಕ್ಲಸ್ಸಿಗೆ ಬಲುಪ್ರೀತಿ; ಹೈಲಾಸಿಗೂ ಹೆರ್ಯಾಕ್ಲಸ್ಸಿನ ವಿಷಯದಲ್ಲಿ ಹೀಗೆಯೇ ಇದ್ದಿತು. ಹೈಲಾಸನು ಅದೃಶ್ಯವಾಗಿ ಹೋದುದಕ್ಕಾಗಿ ಹೆರ್ಯಾಕ್ಲಸ್ಸಿಗೆ ಮೊದಮೊದಲು ಹೆದರಿಕೆಯೂ ಬಳಿಕ ಚಿಂತೆಯೂ ಉಂಟಾದುವು. ಕತ್ತಲೆಯಾದಮೇಲೆಯೂ ಅವನು ಅಲ್ಲಿಗೆ ಬಾರದಿದ್ದುದರಿಂದ ಅವನಿಗೆ ಶೋಕವು ಹೆಚ್ಚಿ ಹುಟ್ಟಿನ ಮರವನ್ನೂ, ಬುತ್ತಿಯನ್ನೂ ತ್ಯಜಿಸಿ "ಹೈಲಾಸ್! ಓ ಹೈಲಾಸ್!!" ಎಂದು ಕೂಗಿಕೊಳ್ಳುತ್ತಾ ದಿಕ್ಕುದಿಕ್ಕಿನಲ್ಲಿಯೂ ಸುತ್ತಾಡುತ್ತಿದ್ದನು.

೫೯. ರಾತ್ರೆ ಬಹಳ ಹೊತ್ತಾದರೂ ಹೆರ್ಯಾಕ್ಲಸ್ಸನೂ ಹೈಲಾಸನೂ ಹಡಗಿಗೆ ಹಿಂದಿರುಗದಿದ್ದುದರಿಂದ, ನಾವಿಕರಿಗೆ ಸಂಶಯವೂ ಚಿಂತೆಯೂ ಉಂಟಾದುವು. ಅವರನ್ನು ಹುಡುಕಿ ಕರೆತರುವುದಾಗಿ ಹೊರಟಿದ್ದ ಕೆಲವರು ನಾವಿಕರು ಎಲ್ಲೆಲ್ಲೋ ಬಹಳ ಸುತ್ತಾಡಿ ಬಳಲಿ ದೋಣಿಗೆ ಹಿಂದಿರುಗಿದರು. ಈ ಸಮಯದಲ್ಲಿ ದೋಣಿಯಲ್ಲಿದ್ದವರೊಳಗೆ ಬಹಳ ವಾಗ್ವಾದವು ನಡೆಯುತ್ತಿದ್ದಿತು. ಬಲಿಷ್ಠನಾದ ಹೆರ್ಯಾಕ್ಲಸ್ಸನ್ನು ಬಿಟ್ಟು ಮುಂದಕ್ಕೆ ಹೊರಡಲು ಕೆಲವರು ಇಷ್ಟಪಡದಿದ್ದುದೇ ಈ ವಾಗ್ವಾದಕ್ಕೆ ಕಾರಣವು. ಉತ್ತರದಿಕ್ಕಿನ ವಾಯುದೇವನಾದ ಬೋರಿಯಸ್ಸಿನ ಮಕ್ಕಳುಗಳಾದ ಕಲಾಯಿಸ್, ಜೀಟೀಸ್ ಎಂಬ ಇಬ್ಬರು ನಾವಿಕರು ಹೆರ್ಯಾಕ್ಲಸ್ಸಿನ ವಿಷಯದಲ್ಲಿ ಸ್ಪರ್ಧಿಸುತ್ತಿದ್ದುದರಿಂದ, ಹೆರ್ಯಾಕ್ಲಸ್ಸನ್ನು ಬಿಟ್ಟೇ ಹಡಗು ಹೊರಡತಕ್ಕುದೆಂದು ಬಲವಾಗಿ ವಾದಿಸುತ್ತಿದ್ದರು. ಈ ವಾದವನ್ನು ಇನ್ನೂ ಅನೇಕರು ಒಪ್ಪುವಹಾಗೆ ಕಾಣುತ್ತಿದ್ದಿತು. ಅವರಿಗೆ ತಮ್ಮ ಕರ್ತವ್ಯವನ್ನು ಬೋಧಿಸಲು ಶಕ್ತಿಯಿದ್ದ ಮರದಬೊಂಬೆಯು ಸಮೀಪದಲ್ಲಿದ್ದಾಗ ಅಷ್ಟೊಂದು ವಿವಾದ

ವು ನಿರರ್ಥಕವೆಂದು ಜೇಸನ್ನನು ಸಮಾಧಾನಹೇಳಿ, ಬೊಂಬೆಯ ಬಳಿಗೆ ಹೋಗಿ ಆ ಸಂದರ್ಭವನ್ನು ಏನುಮಾಡಬೇಕೋ ತಿಳಿಸಬೇಕೆಂದು ಪ್ರಾರ್ಥಿಸಿಕೊಂಡನು. "ಹೆರ್ಕ್ಯುಲ್ಸನು ನಿಮ್ಮೊಡನೆ ಬಂದು ಕನಕಕೋಶಾರ್ಜನಕಾಲದಲ್ಲಿ ಸಾಹಾಯ್ಯ ಮಾಡುವುದು ದೈವೇಚ್ಛೆಯಲ್ಲ; ನೀವು ಹಿಂದಿರುಗುವಾಗ ದಾರಿಯಲ್ಲಿ ಅವನು ಒಂದು ನಿಮ್ಮ ಗುಂಪನ್ನು ಸೇರಿಕೊಳ್ಳುವನು" ಎಂದು ಬೊಂಬೆಯು ಹೇಳಿತು. ಇದರಿಂದ ನಾವಿಕರ ವಾಗ್ವಾದವೆಲ್ಲವೂ ಶಾಂತವಾಗಲು, ಉಳಿದ ನಾವಿಕರೆಲ್ಲರೂ ಏಕಮನಸ್ಕರಾಗಿ ಮುಂದೆ ಹೊರಟರು.



# ಹತ್ತನೆಯ ಪ್ರಕರಣ.

## ಜಂಬಗಾರನಾದ ಒಬ್ಬ ದಾಂಡಿಗನು.

೬೦. ದೋಣಿಯು ಪೂರ್ವಾಭಿಮುಖವಾಗಿ ಹೊರಟು ಒಂದೆರಡು ದಿನಗಳಲ್ಲಿ ಬೆಬ್ರಿಸಿಯ ಎಂಬ ಒಂದು ರಾಜ್ಯಕ್ಕೆ ಬಂದಿತು. ಸಮುದ್ರತೀರದಲ್ಲಿ ಕಾವಲಿದ್ದ ಆಳುಗಳು ದೂರದಲ್ಲಿ ಹೊಸಬರು ಬರುತ್ತಿದ್ದುದನ್ನು ಅಲ್ಲಿಯ ದೊರೆಯಾದ ಆಮಿಕಸ್ ಎಂಬಾತನಿಗೆ ಅರಿಕೆಮಾಡಿದರು. ಈ ದೊರೆಯು ಗಾತ್ರದಲ್ಲಿ ಸಾಧಾರಣಮನುಷ್ಯರಿಗಿಂತ ಬಲು ದೊಡ್ಡವನು. ಮುಷ್ಟಿಯಯುದ್ಧದಲ್ಲಿ ಇವನಿಗೆ ಬಹಳ ಪ್ರೀತಿಯೂ ಕೌಶಲವೂ ಇದ್ದುವು. ಆದರೆ ಇವನಿಗೆ ಬಹಳ ಗರ್ವವಿದ್ದಿತು. ಆದುದರಿಂದ ಸಿಕ್ಕಿಸಿಕ್ಕಿದವರನ್ನೆಲ್ಲಾ ಇವನು ಮುಷ್ಟಿಯ ಯುದ್ಧಕ್ಕೆ ಕರೆಯುತ್ತಿದ್ದನು. ಇವನ ಕೀಟಲೆಯನ್ನು ತಡೆಯಲಾರದೆ ಯಾರಾದರೂ ಇವನೊಡನೆ ಮುಷ್ಟಿಯುದ್ಧಕ್ಕೆ ನಿಂತರೆ, ಪ್ರಾಯಶಃ ಅಂತಹವನು ಬದುಕಿಬರುತ್ತಲೇ ಇರಲಿಲ್ಲ ; ಒಂದು ವೇಳೆ ಜೀವಸಹಿತವಾಗಿ ಉಳಿದುಕೊಂಡರೂ ಅವನ ಕೈಯೋ, ಕಣ್ಣೋ, ಕಿವಿಯೋ ಊನವಾಗಿಹೋಗುತ್ತಿದ್ದುವು.

೬೧. ಹೊಸಬರು ಬಂದ ಸುದ್ದಿಯನ್ನು ಕೇಳಿದಕೂಡಲೆ ತನ್ನೊಡನೆ ಮುಷ್ಟಿಯುದ್ಧ ಮಾಡಲು ಯಾರಾದರೂ ಸಿಕ್ಕುವರೆಂದು ಆಮಿಕಸ್ಸಿಗೆ ಬಹಳ ಸಂತೋಷವಾಯಿತು. ಅವನು ಎರಡು ಜೋಡಿ ಕೈಚೀಲಗಳನ್ನು ತೆಗೆಯಿಸಿಕೊಂಡು ದೋಣಿಯು ದಡಮುಟ್ಟುವುದಕ್ಕೆ ಸ್ವಲ್ಪ ಮುಂಚೆ ಹೋಗಿ ತೀರದಲ್ಲಿ

ನಿಂತುಕೊಂಡು ಜೇಸನ್ ಮೊದಲಾದವರನ್ನು ಕುರಿತು—"ನಿಮ್ಮಲ್ಲಿ ಯಾರಾ ದರೂ ನನ್ನೊಡನೆ ಮುಷ್ಟಿಯುದ್ಧವನ್ನು ಮಾಡುವರಿರುವಿರೋ? ಅಥವಾ ಈ ವಿದ್ಯೆಯಲ್ಲಿ ನಾನೇ ಗಟ್ಟಿಗನೆಂದು ಯುದ್ಧವಿಲ್ಲದೆಯೇ ಒಪ್ಪಿಕೊಂಡುಬಿಡುವಿರೋ? ಬೇಗ ಉತ್ತರಕೊಡಿ. ಉತ್ತರ ಹೇಳಿದಹೊರತು ನನ್ನ ರಾಜ್ಯದಲ್ಲಿ ಕಾಲಿಡಕೂ ಡದು" ಎಂದು ಹೇಳಿದನು. ಆಗ ಜೇಸನ್ನನು ಆರ್ಗೋನಾವಿಕರಲ್ಲೊಬ್ಬನಾದ ಪಾಲ್ಲಕ್ಸ್ ಎಂಬಾತನ ಮುಖವನ್ನು ನೋಡಿ ಸನ್ನೆಮಾಡಿದನು. ಇವನಿಗೆ ಮಲ್ಲ ಯುದ್ಧದಲ್ಲಿ ಬಹಳ ಪರಿಶ್ರಮವಿದ್ದಿತು; ಆದುದರಿಂದಲೇ ಜೇಸನ್ನನು ಇವನಿಗೆ ಸನ್ನೆ ಮಾಡಿದುದು. ಪಾಲ್ಲಕ್ಸನು ಅಮಿಕಸ್ಸನ್ನು ಸಂಬೋಧಿಸಿ—"ನನಗೆ ಮುಷ್ಟಿಯು ದ್ಧವು ಸುಮಾರಾಗಿ ಬರುವುದು. ನಿನ್ನೊಡನೆ ಒಂದಿಷ್ಟು ಹೊತ್ತು ಕಾದಾಡಿ, ಬಳಿಕ ನೀನೇ ಗಟ್ಟಿಗನೆಂದು ಒಪ್ಪಿಕೊಳ್ಳಬಹುದಷ್ಟೆ?' ಎಂದು ಹೇಳಿದನು. ಜಂಬ ಗಾರನಾದ ಅಮಿಕಸ್ಸನು ಅವನನ್ನು ಕಂಡು ಗಹಗಹಿಸಿ ನಕ್ಕು,—"ನೀನು ನನ್ನೊಡನೆ ಯುದ್ಧಮಾಡುವೆಯಾ? ನಿನ್ನ ಎರಡರಷ್ಟು ದಪ್ಪವಾಗಿದ್ದ ಎಷ್ಟೋ ಮಂದಿ ಜಟ್ಟಿಗಳನ್ನು ಸ್ವಲ್ಪಹೊತ್ತಿನಲ್ಲಿಯೇ ಹೊಡೆದುಮಲಗಿಸಿಬಿಟ್ಟಿರುವೆನು. ನೀನು ವ್ಯರ್ಥವಾಗಿ ಏಕೆ ಸಾಯುವೆ? ನಾನೇ ಗಟ್ಟಿಗನೆಂದು ಸುಮ್ಮನೆ ಒಪ್ಪಿಕೊ" ಎಂದನು. ಪಾಲ್ಲಕ್ಸನು ಇದಕ್ಕೆ ಸಮ್ಮತಿಸದಿರಲು, ಅಮಿಕಸ್ಸನು ತಾನು ತಂದಿದ್ದ ಕೈಚೀಲಗಳನ್ನು ಪಾಲ್ಲಕ್ಸಿನ ಮುಂದೆ ಎಸೆದು—"ಇಗೋ! ನೋಡು! ಆ ಮೇಲೆ ನನ್ನ ಕೈಚೀಲ ಒಳ್ಳೆಯುದಲ್ಲ; ಅವನದು ಒಳ್ಳೆಯುದು" ಎಂದು ದೂರಬೇಡ. ನಿನಗೆ ಬೇಕಾದ ಜೋಡಿ ಕೈಚೀಲವನ್ನು ಆರಿಸಿಕೊಂಡು ಯುದ್ಧಕ್ಕೆ ಸಿದ್ಧನಾಗು. ತಿಳಿ ಯಿತೋ?" ಎಂದನು. ಪಾಲ್ಲಕ್ಸನು ತನ್ನ ಸಮೀಪದಲ್ಲಿದ್ದ ಕೈಚೀಲವನ್ನೇ ಹಾಕಿ ಕೊಂಡು ಯುದ್ಧಕ್ಕೆ ಸಿದ್ಧನಾದನು.

೬೨. ಆರ್ಗೋನಾವಿಕರಲ್ಲಿ ಕೆಲವರು—"ಹೆರ್ಕ್ಯಾಕ್ಲಸ್ಸನಾದರೂ ಈ ಸಮಯ ದಲ್ಲಿ ಇದ್ದಿದ್ದರೆ ಚೆನ್ನಾಗಿದ್ದಿತಲ್ಲಾ!" ಎಂದುಕೊಂಡರು; ಇನ್ನೂ ಕೆಲವರು ಪಾಲ್ಲಕ್ಸಿನ ಗತಿಯೇನಾಗುವುದೋ ಎಂದು ಸಂಶಯಪಡುತ್ತಿದ್ದರು. ಇದಿರು ಪಕ್ಕ ದವರಂತೂ ಪಾಲ್ಲಕ್ಸಿನ ಆಯುಸ್ಸು ಅಂದಿಗೇ ಮುಗಿದುಹೋಗಿದ್ದಿತೆಂದು ನಂಬಿ ದ್ದರು. ಸ್ವಲ್ಪ ಹೊತ್ತಿನಲ್ಲಿಯೇ ಇಬ್ಬರು ಯೋಧರೂ ಕಾಳಗಕ್ಕೆ ಮೊದಲು ಮಾಡಿದರು. ತನ್ನ ಮೇಲೆ ಯುದ್ಧಕ್ಕೆ ನಿಂತನಲ್ಲಾ ಎಂಬ ರೋಷದಿಂದ ಅಮಿ ಕಸ್ಸನು ಪಾಲ್ಲಕ್ಸನ್ನು ಒಂದೇ ಏಟಿಗೆ ತೀರಿಸಿಕೊಂಡು ಬಿಡಬೇಕೆಂದು ಗುರಿಕಟ್ಟಿ ಹೊಡೆದನು. ಪಾಲ್ಲಕ್ಸನಾದರೋ ಅದಕ್ಕೆ ಸಿದ್ಧನಾಗಿಯೇ ಇದ್ದನು; ಏಟುಬೀಳುವ

ಹೊತ್ತಿಗೆ ಸರಿಯಾಗಿ ಬೇಕೆಂದು ಕುಕ್ಕುರಿಸಿದನು. ಇದರಿಂದ ಆಮಿಕಸ್ಸನಿಗೆ ಗುರಿ ತಪ್ಪಿದುದು ಮಾತ್ರವೇ ಅಲ್ಲದೆ ಅವನು ಮುಂದಕ್ಕೆ ಮುಗ್ಗುರಿಸಿದನು. ಪ್ರತಿ ಕಕ್ಷಿಯು ಮತ್ತೊಮ್ಮೆ ಗುರಿಕಟ್ಟಿ ಹೊಡೆಯುವ ಸಮಯಕ್ಕೆ ಸರಿಯಾಗಿ ಪಾಲ್ಲಕ್ಸನು ಎಡಕ್ಕೆ ತಿರುಗಿಬಿಟ್ಟುದರಿಂದ ಆಮಿಕಸ್ಸನ ಗುರಿಯು ಮರಳಿ ತಪ್ಪಿ ಹೋಯಿತು. ಈ ಸಲವೇ ಆಮಿಕಸ್ಸಿನ ಕೋಪವು ಮಿತಿಮೀರಿಹೋಗಿದ್ದಿತು. ಮಗುದೊಮ್ಮೆ, ಪಾಲ್ಲಕ್ಸಿಗೆ ಖಂಡಿತವಾಗಿಯೂ ಬುದ್ಧಿಕಲಿಸಬೇಕೆಂದು ಆಮಿಕಸ್ಸನು ತನ್ನ ಎರಡು ಮುಷ್ಟಿಗಳಿಂದಲೂ ಬಲವಾಗಿ ಹೊಡೆದನು. ಆದರೆ ಪಾಲ್ಲಕ್ಸನು ಈ ಸಾರಿ ತಟ್ಟನೆ ಹಿಂದಕ್ಕೆ ನುಸುಳಿಕೊಂಡುಬಿಟ್ಟುದರಿಂದ ಆಮಿಕಸ್ಸಿನ ಮುಷ್ಟಿಗಳು ಒಂದಕ್ಕೊಂದು ತಗುಲಿ, ಅವನ ಮುಖವು, ಬಹಳ ಹುಳಿಯಾದ ಪದಾರ್ಥವನ್ನು ಅರಿಯದೆ ಬಾಯಲ್ಲಿ ಹಾಕಿಕೊಂಡರೆ ಹೇಗಾಗುವುದೋ ಹಾಗೆ ಆಯಿತು; ಅವನ ಕಣ್ಣುಗಳಲ್ಲಿ ನೀರುತುಂಬಿಕೊಂಡಿತು. ಇದನ್ನು ಕಂಡು ಆರ್ಗೋ ನಾವಿಕರು ಗೊಳ್ಳೆಂದು ನಕ್ಕರು; ಅವರು ನಕ್ಕಷ್ಟೂ ಆಮಿಕಸ್ಸಿಗೆ ರೋಷವು ಹೆಚ್ಚಿತು. ಅವನು ಯಾವ ಯಾವ ಪಟ್ಟುಗಳನ್ನು ಪ್ರಯೋಗಿಸಿದರೂ ಗಾಳಿಯನ್ನು ಗುದ್ದಿ ಮೈನೋಯಿಸಿಕೊಂಡಂತೆ ಆಯಿತೇ ಹೊರತು ಪಾಲ್ಲಕ್ಸಿಗೆ ಒಂದು ಏಟಾದರೂ ತಗುಲಲಿಲ್ಲ.

೬೩. ಇಷ್ಟುಹೊತ್ತಿಗೆ ಆಮಿಕಸ್ಸಿನ ಗರ್ವವು ಮುಕ್ಕಾಲುಪಾಲು ಅಣಗಿ ಹೋಗಿದ್ದಿತು. ಪಾಲ್ಲಕ್ಸನು ಬೇಗಬೇಗನೆ ಸುತ್ತಾಡುತ್ತಾ ಆಮಿಕಸ್ಸನ್ನು ಚೆನ್ನಾಗಿ ದಣಿಸಿಬಿಟ್ಟು ಒಳ್ಳೆಯ ಸಮಯನೋಡಿಕೊಂಡು ಅವನ ಮುಖದಮೇಲೆ ಒಂದು ಸಲ ಮುಷ್ಟಿಪ್ರಹಾರವನ್ನು ಮಾಡಿದನು. ಇದರ ರಭಸಕ್ಕೆ ಅವನ ಮೂಗಿನ ಸರೆಗಳು ಒಡೆದು ರಕ್ತವು ಧಾರೆಧಾರೆಯಾಗಿ ಹರಿಯಲಾರಂಭಿಸಿತು. ಅವನಿಗೆ ಚೇತರಿಸಿಕೊಳ್ಳಲು ಸ್ವಲ್ಪ ಅವಕಾಶವನ್ನು ಕೊಟ್ಟಬಳಿಕ ಪಾಲ್ಲಕ್ಸನು ಪುನಃ ಯುದ್ಧಕ್ಕೆ ನಿಂತನು. ಆಮಿಕಸ್ಸಿಗೆ ಕೋಪವು ತಡೆಯಲಾರದಷ್ಟು ಬಂದಿದ್ದಿತು; ಆದರೆ ಕೋಪದಿಂದ ಕಾಳಗವನ್ನು ಗೆಲ್ಲಲಾಗುವುದೆ? ಅವನು ಹೇಗೋ ಅತ್ಯಂತ ಸಾಹಸಪಟ್ಟು ಪಾಲ್ಲಕ್ಸಿಗೆ ಒಂದು ಏಟನ್ನು ಹೊಡೆದರೂ, ಆ ಹೊಡೆತವೂ ಅಷ್ಟು ಬಲವಾದುದಾಗಿರಲಿಲ್ಲ. ಪಾಲ್ಲಕ್ಸನು "ಇಗೋ! ನಿನ್ನ ಏಟಿನ ಸಾಲವನ್ನು ಬಡ್ಡಿಸಹಿತ ತೀರಿಸುವೆನು; ತೆಗೆದುಕೊ" ಎಂದು ಹೇಳಿ ಒಂದು ಏಟನ್ನು ಬಲವಾಗಿ ಕೊಟ್ಟನು. ಇದರಿಂದ ಆಮಿಕಸ್ಸಿನ ಹೆಗಲಿನ ಒಂದು ಮೂಳೆಯು ಮುರಿಯಿತು. ಆದರೂ ಹಠದಿಂದ ಅವನು ಯುದ್ಧಕ್ಕೆ ನಿಂತೇ ಇದ್ದಕಾರಣ. ಮೂರನೆಯ ಸಾರಿ ಮತ್ತೊಂದು

ಏಟನ್ನು ಆಮಿಕಸ್ಸಿನ ಕಿವಿಯ ಬುಡಕ್ಕೆ ತಾಕುವಂತೆ ಪಾಲ್ಲಕ್ಸನು ಹೊಡೆದುದರಿಂದ ಅವನು ತತ್ತರಿಸತೊಡಗಿದನು; ಕಣ್ಣುಗಳಿಗೆ ಕತ್ತಲೆ ಕವಿದುಕೊಂಡಿತು; ಕಿವಿಯಲ್ಲಿ ಏನೋ ಅಪೂರ್ವವಾದ ಶಬ್ದವುಂಟಾಗಿ ಸ್ವಲ್ಪ ಹೊತ್ತಿನಲ್ಲಿಯೇ ನಿಶ್ಚೇತನನಾಗಿ ಅವನು ನೆಲದ ಮೇಲೆ ಬಿದ್ದುಬಿಟ್ಟನು. ಅವನ ಕಡೆಯ ಪರಿಚಾರಕರು ಎಷ್ಟೋ ಉಪಚರಿಸಿದ ಮೇಲೆ ಆಮಿಕಸ್ಸಿಗೆ ಜ್ಞಾನವು ಬಂದಿತು. ಆದರೆ ಪಾಲ್ಲಕ್ಸಿನ ಕಡೆಗೆ ನೋಡಲೂ ಸಹ ಅವನಿಗೆ ಧೈರ್ಯವಿರಲಿಲ್ಲ.

೭೪. ಆಗ ಪಾಲ್ಲಕ್ಸನು ಮತ್ತೆ ಅವನನ್ನು ಯುದ್ಧಕ್ಕೆ ಕರೆದನು. ಆಮಿಕಸ್ಸನಾದರೋ ಹಿಂದೆ ತನಗೆ ಉಂಟಾಗಿದ್ದ ಜಯಗಳಿಂದ ಮತ್ತನಾಗಿ ಅನೇಕರನ್ನು ಹೀಯಾಳಿಸುತ್ತಿದ್ದುದು ಸರಿಯಲ್ಲವೆಂದು ಯೋಚಿಸಿಕೊಳ್ಳುತ್ತಿದ್ದನು. ಅವನ ದೀನದೃಷ್ಟಿಯಿಂದ ಪಾಲ್ಲಕ್ಸನು ಆಮಿಕಸ್ಸಿನ ಮನೋಭಾವವನ್ನರಿತು, ಇನ್ನುಮುಂದೆ ಯಾರನ್ನೂ ಮುಷ್ಟಿಯುದ್ಧಕ್ಕೆ ಕೆಣಕುವುದಿಲ್ಲವೆಂದು ಅವನಿಂದ ಪ್ರಮಾಣಮಾಡಿಸಿ ಆ ಮುಷ್ಟಿಯುದ್ಧವನ್ನು ಮುಗಿಸಿದನು. ಆದರೆ ಆಮಿಕಸ್ಸಿನ ಕಡೆಯ ಆಳುಗಳಿಗೆ ತಮ್ಮ ದಣಿಯು ಆ ದಿನ ಅನುಭವಿಸಿದ್ದ ಅವಮಾನಕ್ಕಾಗಿ ಬಲುಕೋಪವುಂಟಾಗಿದ್ದಿತು. ಪಾಲ್ಲಕ್ಸನು ಮಾಡಿದ ಯುದ್ಧವು ಅನ್ಯಾಯವಾದುದೆಂದು ಹೇಳುತ್ತ ಅವರು ಆರ್ಗೋನಾವಿಕರೊಡನೆ ಕೆಣಕುಜಗಳವನ್ನು ತೆಗೆದರು. ಆದುದರಿಂದ ಜೇಸನ್ ಮೊದಲಾದವರು ಅವರನ್ನು ಚೆನ್ನಾಗಿ ಶಿಕ್ಷಿಸಿ ಆಮಿಕಸ್ಸಿಗೆ ಕಲಿಸಿದ್ದಂತೆಯೇ ಅವರಿಗೂ ವಿವೇಕವನ್ನುಂಟುಮಾಡಿ ಮುಂದಕ್ಕೆ ಪಯಣಹೊರಟರು.

# ಹನ್ನೊಂದನೆಯ ಪ್ರಕರಣ.

## ಒಬ್ಬ ನಿರ್ಭಾಗ್ಯನಾದ ದೊರೆಯ ಕಷ್ಟನಿವಾರಣೆ.

೭೫. ಆರ್ಗೋನಾವೆಯು ಪ್ರೋಪಾಂಟಿಸ್ ಸಮುದ್ರದಲ್ಲಿ ಇದುವರೆಗೂ ಬಲದಡದ ಬಳಿಯಲ್ಲಿಯೇ ಪ್ರಯಾಣಮಾಡುತ್ತಿದ್ದಿತು. ಈಗ ನಾವಿಕರು ಎಷ್ಟೆಷ್ಟೇ ತಡೆಯುತ್ತಿದ್ದರೂ ದೋಣಿಯು ಎಡದಡದ ಕಡೆಯೇ ತಿರುಗುತ್ತಿದ್ದಿತೆಂದು ಕಂಡಿತು. ದೋಣಿಯ ಬೊಂಬೆಯನ್ನು ಕೇಳಲು, ಪ್ರೊಪಾಂಟಿಸ್ಸಿನ ಬಲದಡದಲ್ಲಿ ಆ ನಾವಿಕರು ಮಾಡಬೇಕಾದುದು ಮತ್ತೇನೂ ಇಲ್ಲವೆಂದು ತಿಳಿಯಿತು. ದೋಣಿ

ಯು ಸ್ವಲ್ಪಕಾಲ ಎಡತೀರದಲ್ಲಿ ಪಯಣಮಾಡಿದಕೂಡಲೆ ಥ್ರೇಸ್ ಎಂಬ ಪ್ರದೇಶಕ್ಕೆ ಬಂದಿತು. ನಾವಿಕರು ಆ ರಾಜ್ಯದ ಮುಖ್ಯಪಟ್ಟಣದ ಸಮೀಪಕ್ಕೆ ಬರುವಾಗ ಸಮುದ್ರತೀರದಲ್ಲಿ ಆಶ್ಚರ್ಯಕರವಾದ ಒಂದು ನೋಟವನ್ನು ಕಂಡರು.

೬೬. ದೋಣಿಯು ದಡವನ್ನು ಸೇರುವ ಸ್ಥಳಕ್ಕೆ ಸ್ವಲ್ಪ ದೂರದಲ್ಲಿ ಒಬ್ಬ ಮನುಷ್ಯನೂ ಅವನಿಗೆ ಮತ್ತಷ್ಟು ದೂರದಲ್ಲಿ ಕೆಲವರು ಆಳುಗಳೂ ಇದ್ದರು. ಅವನ ತಲೆಯ ಮೇಲಿದ್ದ ಕಿರೀಟದಿಂದಲೂ, ಧರಿಸಿದ್ದ ಉಡಪಿನಿಂದಲೂ ಅವನು ಆ ಪ್ರಾಂತದ ರಾಜನೆಂದು ಸುಲಭವಾಗಿ ತಿಳಿಯುವಂತಿದ್ದಿತು. ಅವನ ಕೈಯಲ್ಲಿ ಮಾತ್ರ ರಾಜದಂಡಕ್ಕೆ ಪ್ರತಿಯಾಗಿ ಊರುಗೋಲೊಂದು ಇದ್ದಿತು. ಮುಖವೂ ಕೈಕಾಲುಗಳೂ ಕ್ಷಯರೋಗಿಯ ಅವಯವಗಳಂತೆ ಬಹಳ ಕೃಶವಾಗಿದ್ದುವು; ಅವನ ಕಣ್ಣುಗುಡ್ಡೆಗಳು ಒಡೆದುಹೋಗಿ ನೋಡುವುದಕ್ಕೆ ಭಯಂಕರವಾಗಿದ್ದುವು. ಅವಕ್ಕೆ ಸ್ವಲ್ಪಮಾತ್ರವೂ ದೃಷ್ಟಿಪಾಟವವಿರಲಿಲ್ಲವಾದುದರಿಂದಲೇ, ಅವನು ಒಂದು ಕೈಯಲ್ಲಿ ಊರುಗೋಲಿನಿಂದ ಸುತ್ತಲೂ ತಡಕಿನೋಡುತ್ತ, ಮತ್ತೊಂದು ಕೈಯಿಂದ ತಡವರಿಸುತ್ತ ಮೆತ್ತಮೆತ್ತಗೆ ಸಮುದ್ರದ ಅಂಚಿನವರೆಗೂ ಬಂದಿದ್ದನು. ಅವನಿಗೆ ಫೀನಿಯಸ್ ಎಂದು ಹೆಸರಿದ್ದಿತು. ನಾವಿಕರಲ್ಲಿ ಕೆಲವರು ಅವನನ್ನು ಕಂಡು, ಸಮುದ್ರದಲ್ಲಿ ಬಿದ್ದು ಸಾಯುವನಲ್ಲಾ ಎಂದು ಚಿಂತಿಸುತ್ತಿದ್ದರು.

೬೭. ದೋಣಿಯು ಸಮುದ್ರತೀರಕ್ಕೆ ಸೇರಿದುದನ್ನು ಆ ರಾಜನು ಶಬ್ದದಿಂದಲೇ ತಿಳಿದು "ಜೇಸನ್! ನಿನಗೆ ಸ್ವಾಗತವು!" ಎಂದು ಗಟ್ಟಿಯಾಗಿ ಹೇಳಿದನು. ಆ ವಿಲಕ್ಷಣಪುರುಷನ ಪರಿಚಯವು ನಾವಿಕರಲ್ಲಿ ಒಬ್ಬರಿಗೂ ಇರಲಿಲ್ಲವಾದರೂ, ಅವನಿಗೆ ಅವರ ಪರಿಚಯವಿದ್ದಂತೆ ತೋರಿದುದು ನಾವಿಕರಿಗೆ ಮತ್ತೂ ಆಶ್ಚರ್ಯವನ್ನುಂಟುಮಾಡಿತು. ಅವನಿಗೆ ಭವಿಷ್ಯದ್ವರ್ತಮಾನವು ತಿಳಿದಿದ್ದಕಾರಣ, ಜೇಸನ್ ಮೊದಲಾದವರ ಆಗಮನವನ್ನು ಕುತೂಹಲದಿಂದ ಇದಿರುನೋಡುತ್ತ ಇದ್ದು ಅವನು ಸಕಾಲದಲ್ಲಿ ಸಮುದ್ರತೀರಕ್ಕೆ ಬಂದಿದ್ದನು. ಅವನು ತನ್ನ ಸೇವಕರಿಗೆ ಆಜ್ಞಾಪಿಸಿದಕೂಡಲೆ, ಅವರು ಭಯಭಕ್ತಿಗಳಿಂದ ದೋಣಿಯಬಳಿಗೆ ಬಂದು ನಾವಿಕರ ಪದಾರ್ಥಗಳನ್ನು ಇಳಿಸಲು ಸಾಹಾಯ್ಯಮಾಡಿದರು. ನಾವಿಕರಲ್ಲಿ ಯಾರಿಗೂ ಒಣಜಂಬವಿರಲಿಲ್ಲ. ಪ್ರತಿಯೊಬ್ಬನಿಗೂ ಸಣ್ಣಸಣ್ಣ ಕೆಲಸಗಳ ವಿಷಯದಲ್ಲಿಯೂ ಬಹಳ ಗೌರವವಿದ್ದಿತು. ಆದಕಾರಣ ಅವರಿಗೆ ಸೇವಕರ ಆವಶ್ಯಕತೆಯೇ ಇರಲಿಲ್ಲ. ಆದರೂ ಸೇವಕರ ಸಾಹಾಯ್ಯವನ್ನು ಅಂಗೀಕರಿಸದೆ ಹೋದರೆ ಆ ಕುರುಡ ದೊರೆಯ ಮನಸ್ಸಿಗೆ ಖೇದವಾಗುವುದೆಂದು ತಿಳಿದು ನಾವಿಕರು ಅವರ ಸೇವೆ

ಯನ್ನು ಅಂಗೀಕರಿಸಿದರು. ಇತರರ ಮನಸ್ಸಿಗೆ ಖೇದವಾಗದಂತೆ ನಡೆದುಕೊಳ್ಳು ವುದೇ ಮಹಾತ್ಮರ ಒಂದು ಮುಖ್ಯಲಕ್ಷಣವಷ್ಟೆ!

೭೮. ಆ ರಾಜನು ಅತಿಥಿಗಳನ್ನು ತನ್ನ ಅರಮನೆಗೆ ಕರೆದುಕೊಂಡು ಹೋದಾಗ, ಊಟದ ಸಮಯವಾಗಿದ್ದಿತು. ಭೋಜನಕ್ಕೆ ಎಲ್ಲವೂ ಅಣಿಯಾಗು ತ್ತಿದ್ದಿತು. ಸ್ವಲ್ಪಹೊತ್ತಿನಲ್ಲಿಯೇ ಪರಿಚಾರಕರು ಬಗೆಬಗೆಯ ಭಕ್ಷ್ಯಭೋಜ್ಯ ಪಾನೀಯಗಳನ್ನು ಎಲ್ಲರಿಗೂ ತಂದು ಬಡಿಸಲಾರಂಭಿಸಿದರು. ಇಷ್ಟುಹೊತ್ತಿಗೆ ಫೀನಿಯಸ್ಸನೂ ತನ್ನ ಕಾರ್ಶ್ಯಕ್ಕೆ ಕಾರಣವನ್ನು ವಿವರಿಸಲಾರಂಭಿಸಿದ್ದನು. "ಮಹಾತ್ಮ ರುಗಳಿರಾ! ನನಗೆ ಧನಧಾನ್ಯಾದಿಗಳೂ, ಬಂಧುಮಿತ್ರರೂ ಬೇಕಾದಷ್ಟು ಉಂಟು; ಆದರೆ ಮನಶ್ಶಾಂತಿಮಾತ್ರ ಇರುವುದಿಲ್ಲ. ಇದೊಂದು ಇಲ್ಲದಿದ್ದರೆ, ಎಷ್ಟೇ ಐಶ್ವರ್ಯವಿದ್ದರೂ ವ್ಯರ್ಥವೆಂದು ಮಹಾತ್ಮನಾದ ನಿಮ್ಮ ಗುರುವು ಬೋಧಿ ಸುತ್ತಿದ್ದುದನ್ನು ನೀವು ಎಷ್ಟೋ ಬಾರಿ ಕೇಳಿಯೇ ಇರುವಿರಿ. ನಾನು ಊಟಕ್ಕೆ ಕುಳಿತುಕೊಳ್ಳುವ ಸಮಯಕ್ಕೆ ಸರಿಯಾಗಿ ಎಲ್ಲಿಂದಲೋ ಹೊಲಸುನಾತದ ಕೆಲವು ಪಕ್ಷಿಗಳು ಬಂದು ನನ್ನ ಬಳಿಯಿರುವ ಆಹಾರವನ್ನೆಲ್ಲಾ ಬಾಚಿಕೊಂಡು ಹಾರಿ ಹೋಗುವುವು. ಅವಕ್ಕೆ ಕಾಲನಿಯಮವೇ ಇರುವುದಿಲ್ಲ. ಅವುಗಳ ಕಾಟವನ್ನು ತಪ್ಪಿಸಿಕೊಳ್ಳಬೇಕೆಂದು ಮಧ್ಯರಾತ್ರಿಯಲ್ಲಿ, ದುರ್ಗಮವಾದ ಪ್ರದೇಶದಲ್ಲಿ, ಊಟ ಕ್ಕೆ ಕುಳಿತುಕೊಂಡರೂ, ಆ ಪಕ್ಷಿಗಳ ಕಾಟವು ಒಂದುಸಲವಾದರೂ ನನಗೆ ತಪ್ಪಿರುವುದಿಲ್ಲ. ದೇವತೆಗಳ ಶಾಪದಿಂದಲೇ ನನಗೆ ಹೀಗೆ ಆಗಿರುವುದರಿಂದ, ದೈವಿಕ ವಾದ ಈ ಕಷ್ಟವು ತಪ್ಪುವುದಕ್ಕೆ ಅವಕಾಶವಿರಲಿಲ್ಲ. ಆದರೆ ಈಗ ಇಲ್ಲಿರುವ ಬೋರಿ ಯಾಸಿನ ಮಕ್ಕಳಿಂದ ನನಗೆ ಶಾಪವಿಮೋಚನೆಯಾಗುವ ಕಾಲವು ಒದಗಿರುವ ಕಾರಣ ನನ್ನ ಕಷ್ಟವು ಕೊನೆಗಾಣುವುದು" ಎಂದು ಫೀನಿಯಸ್ಸನು ಹೇಳು ತ್ತಿದ್ದನು.

೭೯. ಇಷ್ಟರಲ್ಲಿ ಪರಿಚಾರಕರು ಊಟಕ್ಕೆ ಸಂಪೂರ್ಣವಾಗಿ ಸಿದ್ಧಪಡಿ ಸಿದ್ದರು. ಆಗ ಅಕಸ್ಮಾತ್ತಾಗಿ ಸುಂಟುರೆಗಾಳಿಯು ಮೊರೆತದಂತೆ ಒಂದು ದೊಡ್ಡ ಶಬ್ದವು ಕೇಳಬಂದಿತು; ಆ ಶಬ್ದವು ಹತ್ತಿರಹತ್ತಿರಕ್ಕೆ ಬಂದಹಾಗೆಲ್ಲಾ ಅದರ ರಭಸವು ಹೆಚ್ಚುತ್ತಬಂದುದೂ ಅಲ್ಲದೆ, ತಡೆಯಲಾಗದ ದುರ್ಗಂಧವೊಂದು ವ್ಯಾಪಿಸು ತ್ತಿದ್ದಿತು. ಅತಿಥಿಗಳಲ್ಲಿ ಅನೇಕರು ತಮ್ಮ ಮೂಗುಗಳನ್ನು ಬಲವಾಗಿ ಮುಚ್ಚಿ ಕೊಂಡರು. ತೃಟಿಮಾತ್ರದಲ್ಲಿ ವಿಲಕ್ಷಣವಾದ ಕೆಲವು ಪಕ್ಷಿಗಳು ಭೋಜನಮಂದಿ ರಕ್ಕೆ ಹಾರಿಬಂದುವು. ಅವುಗಳ ಮುಖವು ಸುಂದರವಾದ ಬಾಲಿಕೆಯರ ಮುಖ

ದಂತೆ ಇದ್ದುವು; ಆದರೆ ಅವು ಎಷ್ಟೋಕಾಲದಿಂದ ತಿನ್ನುವುದಕ್ಕಿಲ್ಲದೆ ಬರಗೆಟ್ಟವರ ಮುಖದಂತೆ ತೋರುತ್ತಿದ್ದುವು. ಅವುಗಳ ಮೈಯೂ ರೆಕ್ಕೆಪುಕ್ಕಗಳೂ ಪಕ್ಷಿಗಳಿಗೆ ಇರುವಂತೆಯೇ ಇದ್ದುವು. ಆದರೆ ಅವುಗಳ ಕೊಕ್ಕೂ ಉಗುರುಗಳೂ ಅವುಗಳ ಗಾತ್ರಕ್ಕೆ ಮಿೀರಿದುವಾಗಿ ಬಹು ಭಯಂಕರವಾಗಿದ್ದುವು. ಎಂದಿಗಿಂತಲೂ ಸಮೃದ್ಧಿಯಾಗಿ ಬಡಿಸಿದ್ದ ಆಹಾರವನ್ನೆಲ್ಲಾ ಆ ಪಕ್ಷಿಗಳು ಸ್ವಲ್ಪ ಹೊತ್ತಿನಲ್ಲಿಯೇ ತಿಂದುಬಿಟ್ಟು ಹಾರಿಹೋದುವು. ಈ ಸಮಯಕ್ಕೆ ಸರಿಯಾಗಿ, ನಾವಿಕರ ಮಧ್ಯದಲ್ಲಿದ್ದ ಜೇಟೀಸ್, ಕಲಾಯಿಸ್ ಎಂಬವರ ಕಣಕಾಲುಗಳಿಂದ ಹೊಂಬಣ್ಣದ ರೆಕ್ಕೆಗಳು ಕಾಣಬಂದುವು. ಅವರಿಬ್ಬರೂ ತಮ್ಮ ತಮ್ಮ ಆಯುಧಗಳನ್ನು ಹಿಡಿದು ಪಕ್ಷಿಗಳ ಹಿಂದೆಯೇ ಬಹುವೇಗವಾಗಿ ಹಾರಿಹೋದರು. ಎಂದೂ ಕಾಣದಿದ್ದ ಈ ಶತ್ರುಗಳನ್ನು ಕಂಡು ಆ ಪಕ್ಷಿಗಳು ಹೆದರಿ ತಮಗೆ ಶಕ್ತಿಯಿದ್ದಷ್ಟು ಬೇಗಬೇಗನೆ ಹಾರಿಹೋದವು. ಮುಂದೆ ಆ ಹಕ್ಕಿಗಳೂ, ಹಿಂದೆ ಆಕಾಶಗಾಮಿಗಳಾದ ಈ ಇಬ್ಬರೂ ಎಷ್ಟೋದೂರ ಹೋದರು. ಸಮುದ್ರ ಮಧ್ಯದಲ್ಲಿ ಒಂದು ದ್ವೀಪವು ಸಿಕ್ಕಿತು. ಪಕ್ಷಿಗಳು ಇನ್ನು ಮುಂದಕ್ಕೆ ಹಾರಲಾರದೆ ಅಲ್ಲಿ ಬಿದ್ದುಬಿಟ್ಟುವು. ಜೇಟೀಸನೂ ಕಲಾಯಿಸನೂ ಕೆಳಕ್ಕಿಳಿದು ಅವುಗಳನ್ನು ಕೊಂದುಹಾಕುವುದಕ್ಕಾಗಿ ತಮ್ಮ ಕತ್ತಿಗಳನ್ನು ಬೀಸುವುದರಲ್ಲಿದ್ದರು. ಆಗ ಒಬ್ಬ ದೇವದೂತನು ಅವರಿಗೆ ಕಾಣಿಸಿಕೊಂಡು—"ಇವು ದೇವತೆಗಳ ಕೋಪಕ್ಕೆ ಪಾತ್ರರಾದವರನ್ನು ಶಿಕ್ಷಿಸುವುದಕ್ಕಾಗಿಯೇ ಸೃಷ್ಟವಾಗಿರುವುವು; ಫೀನಿಯಸ್ಸಿನ ಶಾಪವು ಇಂದಿಗೆ ನಿವೃತ್ತಿಯಾಯಿತು; ನೀವು ಇವನ್ನು ಕೊಲ್ಲುವುದು ದೇವತೆಗಳಿಗೆ ಇಷ್ಟವಿಲ್ಲ" ಎಂದು ತಿಳಿಸಿದನು. ಆ ಪಕ್ಷಿಗಳೂ ಮನುಷ್ಯಧ್ವನಿಯಿಂದ "ಮುಂದೆ ಎಂದೆಂದಿಗೂ ದೇವರ ಆಣೆಗೂ ನಾವು ಫೀನಿಯಸ್ಸನ್ನು ಕಾಡುವುದಿಲ್ಲ; ನಮ್ಮ ಪ್ರಾಣವನ್ನು ಉಳಿಸಿ" ಎಂದು ಬೇಡಿಕೊಂಡವು. ಆದುದರಿಂದ ಅವರಿಬ್ಬರೂ ತಮ್ಮ ವಧೋದ್ಯೋಗವನ್ನು ಬಿಟ್ಟು ಫೀನಿಯಸ್ಸಿನ ಬಳಿಗೆ ಹಿಂದಿರುಗಿದರು.

೭೦. ಇವರು ಬರುವಹೊತ್ತಿಗೆ ಭೋಜನಮಂದಿರದಲ್ಲಿ ಪುನಃ ಭೋಜನಕ್ಕೆ ಸಿದ್ಧಪಡಿಸಿದ್ದರು; ಫೀನಿಯಸ್ಸಿಗೆ ದೃಷ್ಟಿಯು ಬಂದಿದ್ದಿತು; ಅವನ ಮುಖದಮೇಲಿದ್ದ ದೈನ್ಯಚಿಹ್ನೆಗಳು ಹೋಗಿ ಅವನು ಬಹಳಗೆಲುವಾಗಿ ಕಾಣುತ್ತಿದ್ದನು. ಅವನ ಧ್ವನಿಯೂ ಬಹಳ ಸಂತೋಷದ್ಯೋತಕವಾಗಿದ್ದಿತು. ಫೀನಿಯಸ್ಸನು ಆಹಾರವನ್ನು ತಿಂದು ಅಂದಿಗೆ ಎಷ್ಟೋವರುಷಗಳಾಗಿ ಹೋಗಿದ್ದುದರಿಂದ ಅವ

ನಿಗೆ ಆ ದಿನ ಆಹಾರದಲ್ಲಿ ಅತ್ಯಪೂರ್ವವಾದ ರುಚಿಯು ತೋರುತ್ತಿದ್ದಿತು. ಅತಿಥಿಗಳೆಲ್ಲರೂ ಸಂತೃಪ್ತಿಯಾಗಿ ಊಟಮಾಡುವಂತೆ ಫೀನಿಯುಸ್ಸನು ಬಹಳವಾಗಿ ಉಪಚಾರಹೇಳುತ್ತಿದ್ದನು. ಈ ನಡುವೆ "ನಿನಗೆ ಶಾಪವು ಬಂದಿದ್ದುದಕ್ಕೆ ಕಾರಣವೇನು?" ಎಂದು ಜೇಸನ್ನನು ಕೇಳಲು,—"ಒಬ್ಬ ದೇವತೆಯು ತನಗೆ ಸಂಬಂಧಪಟ್ಟ ಒಂದು ಗುಪ್ತವಿಷಯುವನ್ನು ಕೇಳಿದನು; ಅದನ್ನು ನಾನು ಹೇಳಿದ್ದರೆ ಅನೇಕ ಜಗಳಗಳುಂಟಾಗುತ್ತಿದ್ದುವು. ಆದುದರಿಂದ ನಾನು ಹೇಳಲಿಲ್ಲ. ಈ ಕಾರಣಕ್ಕಾಗಿ ನನಗೆ ಶಾಪವು ಬಂಧಿದ್ದಿತು. ನನಗೆ ಕಷ್ಟಬಂದರೂ ಚಿಂತೆಯಿಲ್ಲ. ನನ್ನಿಂದ ಇತರರಿಗೆ ಕಷ್ಟವುಂಟಾಗಲಿಲ್ಲವಲ್ಲಾ! ಎಂದು ಸಂತೋಷಪಡುತ್ತಿರುವೆನು"* ಎಂಬುದಾಗಿ ಫೀನಿಯುಸ್ಸನು ಉತ್ತರ ಹೇಳಿದನು.

೭೧. ಮಾರನೆಯದಿನದ ಪ್ರಾತಃಕಾಲದಲ್ಲಿ ಮುಂದಕ್ಕೆ ಪಯಣಬಳೆಯಿಸುವ ವಿಚಾರವನ್ನು ಪ್ರಸ್ತಾವಿಸಿದಾಗ, ಅಲ್ಲಿಗೆ ಸ್ವಲ್ಪದೂರದಲ್ಲಿ ಮೃತ್ಯುವಿನ ಬಾಯಂತಿರುವ ತೇಲುವ ಬಂಡೆಗಳಿರುವುವೆಂದೂ ದೇವತೆಗಳಿಗೆ ಅಮೃತಾಹಾರವನ್ನು ತೆಗೆದುಕೊಂಡು ಹೋಗುತ್ತಿದ್ದ ಪಾರಿವಾಳದ ಪಕ್ಷಿಗಳನ್ನೂ ಸಹ ಸಲಕ್ಕೆ ಒಂದೊಂದರಂತೆ ಅವು ಅನೇಕವೇಳೆ ತಮ್ಮನಡುವೆ ಸಿಕ್ಕಿಸಿಕೊಂಡು ಕೊಂದುಬಿಟ್ಟಿರುವುವೆಂದೂ ತಿಳಿಸಿ, ಅವುಗಳಿಂದ ತಪ್ಪಿಸಿಕೊಳ್ಳಬಹುದೋ ಇಲ್ಲವೋ ಎಂಬುದನ್ನು ಅರಿಯಲು ಒಂದು ಪಾರಿವಾಳವನ್ನು ಮುಂಚೆ ಹಾರಿಸಿ ತಿಳಿದುಕೊಳ್ಳಬಹುದೆಂದೂ ಫೀನಿಯುಸ್ಸನು ಉಪಾಯುವನ್ನು ಹೇಳಿದನು. ಬಳಿಕ ನಾವಿಕರು ಫೀನಿಯುಸ್ಸಿನ ಅಪ್ಪಣೆಯುನ್ನು ಪಡೆದು ಮುಂದಕ್ಕೆ ಪಯಣಹೊರಟರು.



# ಹನ್ನೆರಡನೆಯ ಪ್ರಕರಣ.

## ಮೃತ್ಯುವಿನ ಬಾಯಿ; ಕಂಚಿನಗರಿಯ ಪಕ್ಷಿಗಳು.

೭೨. ಸ್ವಲ್ಪದೂರ ಪ್ರಯಾಣಮಾಡಿದ ಮೇಲೆ ನಾವಿಕರಿಗೆ ಸಮುದ್ರದ ಆಚೆಯೀಚೆಕಡೆಯ ತೀರಗಳು ಹತ್ತಿರಹತ್ತಿರಕ್ಕೆ ಬರುತ್ತಿದ್ದಂತೆ ತೋರಿದುವು.

* ಫೀನಿಯುಸ್ಸನು ತನ್ನ ಎರಡನೆಯ ಹೆಂಡಿತಿಯ ಚಾಡಿಯ ಮಾತನ್ನು ಕೇಳಿಕೊಂಡು ತನ್ನ ಹಿರಿಯ ಹೆಂಡಿತಿಯ ಮಕ್ಕಳನ್ನು ಘೋರವಾಗಿ ಶಿಕ್ಷಿಸಿದುದರಿಂದ ದೇವತೆಗಳು ಫೀನಿಯುಸ್ಸಿಗೆ ಅಂತಹ ಶಿಕ್ಷೆಯನ್ನು ವಿಧಿಸಿದ್ದರೆಂದು ಮತ್ತೊಂದು ಕಥೆಯು ಇರುವುದು.

ಕಡೆಗೆ ಅವರು ಬಂದು ಜಲಸಂಧಿಯನ್ನು ದಾಟಿ ಮತ್ತೊಂದು ಸಮುದ್ರಕ್ಕೆ ಹೋಗಬೇಕಾಗಿರುವುದೆಂದು ಕಂಡುಕೊಂಡರು. ಜಲಸಂಧಿಯನ್ನು ಪ್ರವೇಶಿಸು ವುದಕ್ಕೆ ಸ್ವಲ್ಪ ಮುಂಚೆ ಅದರ ಉಭಯಪಾರ್ಶ್ವಗಳಲ್ಲಿಯೂ ಬೆಳ್ಳಗಿದ್ದ ಎರಡು ಬಲುದೊಡ್ಡ ಬಂಡೆಗಳು ನಾವಿಕರಿಗೆ ಗೋಚರವಾದುವು. ಅವುಗಳ ಮೇಲಿಂದ ಬೆಳ್ಳಗಿದ್ದ ಸಣ್ಣ ಕಲ್ಲುಹಲಗೆಗಳು ಶಬ್ದಮಾಡುತ್ತ ಆಗಾಗ ಉದಿರುತ್ತಿದ್ದುವು. ಆ ಎರಡು ಬಂಡೆಗಳೂ ಒಂದೊಂದುಸಾರಿ ಸಮೀಪಿಸುತ್ತಲೂ, ಮತ್ತೆ ಕೆಲವು ಸಾರಿ ಒಂದರಿಂದ ಮತ್ತೊಂದು ದೂರವಾಗಿ ಹೋಗುತ್ತಲೂ ಇದ್ದಂತೆ ಕಾಣುತ್ತಿ ದ್ದುವು. ಫೀನಿಯಸ್ಸನು ಹೇಳಿದ್ದ ತೇಲುವ ಬಂಡೆಗಳು ಅವೇ ಇರಬಹುದೆಂದು ನಾವಿಕರಿಗೆ ಸಂಶಯವುಂಟಾಯಿತು: ಸ್ವಲ್ಪಹೊತ್ತಿನಲ್ಲಿಯೇ ಆ ಬಂಡೆಗಳ ನಡುವೆ ಒಂದು ಹದ್ದು ಹಾರಿಹೋಗಲು ಯತ್ನಿಸಿದಾಗ, ಅದು ಅವುಗಳ ಮಧ್ಯೆ ಸಿಕ್ಕಿ ಸತ್ತುಹೋದುದು ಕಂಡುಬರಲು, ನಾವಿಕರೆಲ್ಲರೂ ಆ ಬಂಡೆಗಳನ್ನೇ ಫೀನಿಯಸ್ಸನು "ಮೃತ್ಯುವಿನ ಬಾಯಿ" ಎಂದು ಕರೆದಿದ್ದನೆಂಬುದಾಗಿ ನಿಶ್ಚಯಿಸಿಕೊಂಡರು.

೭೩. ಜೇಸನ್ನನು ತನ್ನ ದೋಣಿಯಲ್ಲಿದ್ದ ಒಂದು ಪಾರಿವಾಳವನ್ನು ಬಿಡಲು ಅದರ ಒಂದಗರಿಮಾತ್ರ ಕೋಡುಗಲ್ಲುಗಳ ನಡುವೆ ಸಿಕ್ಕಿ ಆ ಪಕ್ಷಿಯು ಪ್ರಾಣ ಸಹಿತವಾಗಿ ತಪ್ಪಿಸಿಕೊಂಡು ಹೊರಟುಹೋಯಿತು. ಇದರಿಂದ ತಮ್ಮ ಪ್ರಯಾಣವು ಸುಗಮವಾಗುವುದೆಂದು ಜೇಸನ್ನನು ಭಾವಿಸಿ ತನ್ನ ಸಂಗಡಿಗರನ್ನು ಪ್ರೋತ್ಸಾ ಹಿಸಿದನು. ಅವರೆಲ್ಲರೂ ಬಲು ಎಚ್ಚರಿಕೆಯಿಂದ ಕಾದಿದ್ದು ಆ ಬಂಡೆಗಳು ಪರಸ್ಪರ ದೂರವಾಗಿ ಅಗಲಿದ್ದ ಸಮಯದಲ್ಲಿ ಬೇಗನೆ ತಮ್ಮ ದೋಣಿಯನ್ನು ನಡೆಯಿಸಿ ಕೊಂಡು ಬಂದರು. ಅದು ಇನ್ನು ಸ್ವಲ್ಪ ತಡವಾಗಿ ಬಂದಿದ್ದರೆ ಅದರಕಡೆಯಲ್ಲಿ ಕುಳಿತಿದ್ದ ನಾವಿಕರು ಬಂಡೆಗಳ ನಡುವೆ ಸಿಕ್ಕಿಹೋಗುತ್ತಿದ್ದರು; ದೋಣಿಯೂ ಕೆಟ್ಟುಹೋಗಿ ಅದರೊಳಕ್ಕೆ ನೀರು ತುಂಬಿಕೊಂಡುಬಿಡುತ್ತಿದ್ದಿತು. ಪ್ರಬಲವಾದ ಈ ಗಂಡವು ತಪ್ಪಿದುದಕ್ಕಾಗಿ ನಾವಿಕರು ದೇವರನ್ನು ವಂದಿಸಿ ಮುಂದಕ್ಕೆ ಹೊರ ಟರು. ಸ್ವಲ್ಪಹೊತ್ತಿಗೆ ಯೂಕ್ಸೈನ್ ಎಂಬ ಸಮುದ್ರವು ಸಿಕ್ಕಿತು. ಇದಕ್ಕೆ ಈಗ ಕಪ್ಪುಕಡಲು ಎಂಬ ಹೆಸರು ಬಂದಿರುವುದು.

೭೪. ಈ ಕಡಲಿನಲ್ಲಿ ಕೆಲವು ದಿನಗಳು ಪ್ರಯಾಣಮಾಡಿದಮೇಲೆ ನಾವಿಕರು ಒಂದು ರಾಜ್ಯಕ್ಕೆ ಬಂದರು. ಅಲ್ಲಿಯ ದೊರೆಗೆ ಲೈಕಸ್ ಎಂದು ಹೆಸರಿದ್ದಿತು. ಕಪ್ಪುಕಡಲಿನ ತೀರದಲ್ಲಿ ಬಹುಕಾಲದಿಂದಲೂ ವಾಸವಾಗಿದ್ದ ಕಪ್ಪನೆಯ ಕಾಡು ಜನರು ಅತಿಥಿ ಅಭ್ಯಾಗತರ ವಿಷಯದಲ್ಲಿ ಬಹಳ ನಿಷ್ಕರುಣಿಗಳಾಗಿದ್ದರೂ, ಲೈಕಸ್ಸ

ಸು ಮಾತ್ರ ತನ್ನ ರಾಜ್ಯಕ್ಕೆ ಬಂದ ಆರ್ಗೋ ನಾವಿಕರನ್ನು ಬಹಳ ಆದರದಿಂದ ಇದಿರುಗೊಂಡು ಉಪಚರಿಸಿದನು. ಆರ್ಗೋ ನಾವಿಕರೂ ಬಹಳ ದಣಿದಿದ್ದುದ ರಿಂದ, ಆ ರಾಜ್ಯದಲ್ಲಿ ಮೂರುನಾಲ್ಕು ದಿನ ವಿಶ್ರಮಿಸಿಕೊಂಡರು. ಇಲ್ಲಿಗೆ ಬರುವ ಹೊತ್ತಿಗೇ ಕರ್ಣಧಾರನಾದ ಟಿಫಿಸ್ಸಿಗೆ ದೇಹಾಲಸ್ಯವಾಗಿದ್ದಿತು; ರೋಗವು ಪ್ರಬ ಲಿಸಿ ಇಲ್ಲಿ ಅವನು ಕಾಲವಶನಾದನು. ಖಗೋಳಶಾಸ್ತ್ರದಲ್ಲಿ ಅವನಿಗೆ ಬಹಳ ಪರಿಶ್ರಮವಿದ್ದಿತು; ಯಾವ ಯಾವ ಗ್ರಹ ನಕ್ಷತ್ರಗಳು ಎಷ್ಟುಎಷ್ಟು ಹೊತ್ತಿಗೆ ಯಾವ ಯಾವ ದಿಕ್ಕಿನಲ್ಲಿ ಇರುವುವು ಎಂಬುದನ್ನು ಅವನು ಚೆನ್ನಾಗಿ ತಿಳಿದು ಕೊಂಡಿದ್ದನು. ದೋಣಿಯನ್ನು ನಡೆಯಿಸುವುದರಲ್ಲಿಯೂ ಅವನು ಬಹಳ ಗಟ್ಟಿ ಗನು. ಒಂದುವೇಳೆ ರಾತ್ರಿಯಕಾಲದಲ್ಲಿಯೂ ಪ್ರಯಾಣಮಾಡಬೇಕಾಗಿ ಬಂದರೆ, ಆ ಸಮಯದಲ್ಲಿ ಮಾತ್ರ ಅವನ ಸಾಹಾಯ್ಯವನ್ನು ಕೋರದೆ, ಮೊದ ಲಿಂದಲೂ ಅವನ ಸಾಹಾಯ್ಯವು ತಮಗೆ ದೊರೆತೇ ಇರಬೇಕೆಂದು ಜೇಸನ್ನನು ಕರ್ಣಧಾರಕತ್ವಕ್ಕೆ ಟಿಫಿಸ್ಸನ್ನು ನೇಮಿಸಿದ್ದನು. ಈಗ ಆತನ ಸಾಹಾಯ್ಯವು ತಪ್ಪಿ ದುದರಿಂದ ನಾವಿಕರಿಗೆ ಬಹಳ ನಷ್ಟವಾದಂತಾಯಿತು. ಇದೇ ಸಮಯದಲ್ಲಿಯೇ ನಾವಿಕರಲ್ಲಿ ಮತ್ತೊಬ್ಬನಾದ ಇಡ್ಮನ್ನನು ಒಂದು ಕಾಡುಹಂದಿಯ ಕೈಗೆ ಸಿಕ್ಕಿ ಹತನಾದನು. ಈತನಿಗೆ ಭವಿಷ್ಯಜ್ಞಾನವಿದ್ದಿತೆಂದು ಹಿಂದೆಯೇ ಹೇಳಿರುವುದು. ಆದರೆ ಈ ನಿರ್ಭಾಗ್ಯನು ತನಗೇ ಸನ್ನಿಹಿತವಾಗಿದ್ದ ಮರಣದ ವಿಷಯಕ್ಕೆ ಗಮನ ಕೊಡದೆ, ಅಲ್ಪವಯಸ್ಸಿನಲ್ಲಿಯೇ ಮೃತ್ಯುವಿನ ಬಾಯಿಗೆ ತುತ್ತಾದನು. ಹೀಗೆ ಕಾಲವಾದ ತಮ್ಮ ಸಂಗಡಿಗರಿಬ್ಬರ ಉತ್ತರಕ್ರಿಯೆಗಳನ್ನು ಮುಗಿಸಿದ ಬಳಿಕ ಆರ್ಗೋನಾವಿಕರು ಮುಂದಕ್ಕೆ ಪಯಣಹೊರಟರು.

೭೫. ಸ್ವಲ್ಪದೂರ ಪ್ರಯಾಣಮಾಡಿದ ಮೇಲೆ ಸಮುದ್ರತೀರದಲ್ಲಿದ್ದ ಒಂದು ಮಣ್ಣಿನ ದಿಬ್ಬದಮೇಲೆ ಒಬ್ಬ ಯೋಧನು ತಟ್ಟನೆ ಕಾಣಿಸಿಕೊಂಡನು. ಅವನ ತಲೆಯಮೇಲೆ ಕಬ್ಬಿಣದ ಕುಲಾವಿಯೂ, ಮೈಮೇಲೆ ಒಂದು ಕವಚವೂ ಇದ್ದುವು; ಆದರೆ ಅವು ಮಣ್ಣುತಿಂದುಹೋಗಿದ್ದುವು. ಅವನ ಒಂದು ಕೈಯಲ್ಲಿ ಕತ್ತಿಯೂ, ಮತ್ತೊಂದರಮೇಲೆ ಗುರಾಣಿಯೂ ಇದ್ದುವು; ಆದರೆ ಕತ್ತಿಗೆ ತುಕ್ಕು ಹಿಡಿದುಹೋಗಿ ಅರ್ಧಭಾಗಕ್ಕೆ ಸರಿಯಾಗಿ ಮುರಿದುಹೋಗಿದ್ದಿತು; ಗುರಾಣಿ ಯೂ, ಬಹುಕಾಲದಿಂದ ಉಪಯೋಗಿಸದೆ, ನೆಲದಲ್ಲಿ ಹೂತಿದ್ದರೆ ಹೇಗೆ ಕಾಣಿ ಸುವುದೋ ಹಾಗೆ ಕಾಣುತ್ತಿದ್ದಿತು. ಆ ಯೋಧನು ಮೂರಾವೃತ್ತಿ ಗಟ್ಟಿಯಾಗಿ ಕೂಗಿ ಮೂರಾವೃತ್ತಿ ತನ್ನ ಮೊಟಕುಕತ್ತಿಯನ್ನು ಅಲ್ಲಾಡಿಸಿ ತಟ್ಟನೆ ಮಾಯ

ಪಾದನು. ಸ್ವಲ್ಪ ಹೊತ್ತಾದ ಬಳಿಕ, ಸೌದೆ ಸೊಪ್ಪುಗಳನ್ನು ಕೂಡಿಸಲು ಬಂದಿದ್ದ ಕೆಲವರು ನಿವಾಸಿಗಳಿಂದ ಆ ಯೋಧನ ವೃತ್ತಾಂತವು ತಿಳಿಯಿತು. ಆರ್ಗೋ ನಾವಿಕರಿಗೆ ಕಾಣಿಸಿಕೊಂಡ ಆಕೃತಿಯು ಮನುಷ್ಯನಲ್ಲವೆಂದೂ, ಅದು ಸ್ಥೆನೆಲಸ್ ಎಂಬೊಬ್ಬ ಗ್ರೀಕ್‌ಯೋಧನ ಪಿಶಾಚ (ಲಿಂಗ) ದೇಹವೆಂದೂ ಒಂದು ಬಾಣವು ತಗುಲಿ ಅವನು ಕಾಲವಾಗಿದ್ದನೆಂದೂ, ಗ್ರೀಸಿನಿಂದ ಬಂದ ತನ್ನ ದೇಶದವರನ್ನು ನೋಡಿದಾಗಲೆಲ್ಲಾ ಆ ಪಿಶಾಚವು ಕಾಣಿಸಿಕೊಂಡು ಆ ರೀತಿಯಲ್ಲಿಯೇ ವರ್ತಿಸು ತ್ತಿದ್ದಿತೆಂದೂ ಅವರು ಹೇಳಿದರು. ಆದುದರಿಂದ ಜೇಸನ್ ಮೊದಲಾದವರು, ಆ ಪಿಶಾಚವು ಕಾಣಿಸಿಕೊಂಡಿದ್ದ ಪ್ರದೇಶದಲ್ಲಿ ತಂಗಿ, ಅದರ ತೃಪ್ತ್ಯರ್ಥವಾಗಿ ಕೆಲವು ಕ್ರಿಯೆಗಳನ್ನು ನಡೆಯಿಸಿದರು. ಆರ್ಫಿಯಸ್ಸನು ಒಂದು ವೀಣೆಯನ್ನು ಸಮೀಪದಲ್ಲಿದ್ದ ಒಂದು ಗಿಡಕ್ಕೆ ನೇತುಹಾಕಿದನು. ಗಾಳಿ ಬೀಸಿದಾಗಲೆಲ್ಲ ಅದರ ತಂತಿಗಳಿಂದ ಧ್ವನಿಯು ಹೊರಡುತ್ತಿದ್ದಿತು. ಅಲ್ಲಿ ಸ್ವಲ್ಪಹೊತ್ತು ವಿಶ್ರಮಿಸಿ ಕೊಂಡು ಬಳಿಕ ಆರ್ಗೋನಾವಿಕರು ಮುಂದೆ ಹೊರಟರು.

೭೬. ಒಂದೆರಡು ದಿನಗಳು ಪ್ರಯಾಣಮಾಡಿದನಂತರ ಆ ನಾವಿಕರು ಮತ್ತೊಂದು ರಾಜ್ಯಕ್ಕೆ ಬಂದರು. ವಿಚಾರಿಸಲಾಗಿ ಅದು ಸ್ತ್ರೀ ರಾಜ್ಯವೆಂದು ಪ್ರಸಿದ್ಧವಾಗಿದ್ದ ಕಪ್ಪಡೋಸಿಯಾ ಪ್ರಾಂತವೆಂದು ತಿಳಿಯಿತು. ಇಲ್ಲಿಯ ಸ್ತ್ರೀ ಯರು ಪುರುಷೋಚಿತವಾದ ಕಾರ್ಯಗಳಲ್ಲಿ ಪ್ರವರ್ತಿಸುತ್ತಾ ಸ್ತ್ರೀಯರಿಗೆ ರೂಢಿ ಯಾಗಿದ್ದ ಕೆಲಸಕಾರ್ಯಗಳನ್ನು ಅಲಕ್ಷ್ಯಮಾಡಿಬಿಟ್ಟಿದ್ದರು. ಪುರುಷರಿಗೆ ತಮ್ಮ ರಾಜ್ಯದಲ್ಲಿ ಪ್ರಾಶಸ್ತ್ಯವೇ ಇಲ್ಲದಂತೆ ಮಾಡಿಕೊಂಡಿದ್ದರು. ಯುದ್ಧವೆಂದರೆ ಈ ವೀರಸ್ತ್ರೀಯರಿಗೆ ಬಲುಪ್ರೀತಿ. ಇವರಿಗೆ ಗಂಡುಮಕ್ಕಳಾದರೆ ಅವರನ್ನು ಅನ್ಯದೇಶ ಗಳ ಜನರಿಗೆ ಕೊಟ್ಟುಬಿಡುತ್ತಿದ್ದರೆಂದು ಹೇಳುವರು; ಇವರು ಪ್ರಾಯಶಃ ತಮ್ಮ ಗಂಡುಮಕ್ಕಳನ್ನು ನಿರ್ಜನಪ್ರದೇಶದಲ್ಲಿ ತ್ಯಜಿಸಿಬಿಡುತ್ತಿದ್ದರೆಂದೂ ಮತ್ತೆ ಕೆಲವರು ಹೇಳುವರು! ಆರ್ಗೋನಾವಿಕರಲ್ಲಿ ಅನೇಕರಿಗೆ ಈ ವೀರಸ್ತ್ರೀಯರನ್ನು ನೋಡ ಬೇಕೆಂದೂ, ಇವರೊಡನೆ ಯುದ್ಧಮಾಡಬೇಕೆಂದೂ ಬಹಳ ಕುತೂಹಲವಿದ್ದಿತು; ಆದರೆ ದೋಣಿಯಲ್ಲಿದ್ದ ಬೊಂಬೆಯು "ಹರ್ಕ್ಯುಲಿಸ್ಸನೂ, ಥೀಸಿಯಸ್ಸನೂ ಮುಂದೆ ಈ ಸ್ತ್ರೀಯರೊಡನೆ ಯುದ್ಧಮಾಡಬೇಕಾಗುವುದು. ಈಗ ನಿಮ್ಮಲ್ಲಿ ಯಾರೂ ಇವರ ಗೊಡವೆಗೆ ಹೋಗುತಕ್ಕುದಿಲ್ಲ" ಎಂದು ಹೇಳಿದುದರಿಂದ ನಾವೆಯು ಮುಂದಕ್ಕೆ ಪ್ರಯಾಣಮಾಡಿಕೊಂಡು ಹೋಯಿತು.

೭೭. ಸ್ವಲ್ಪ ದೂರ ಹೋಗುವುದರೊಳಗಾಗಿ ಅಭೂತಪೂರ್ವವಾದ ಒಂದು ಮೊರೆತವು ಕೇಳಿಸಿತು; ಅದು ಸಮೀಪಿಸಿದಂತೆಲ್ಲಾ ಅನೇಕ ಕತ್ತಿಯ

ಅಲಗುಗಳು ಒಂದಕ್ಕೊಂದಕ್ಕೆ ತಗಲುವುದರಿಂದ ಉಂಟಾಗುವ ಶಬ್ದದಂತೆ ಕೇಳ ಲಾರಂಭವಾಯಿತು. ನಾವೆಯು ಹೋಗುತ್ತಿದ್ದ ದಿಕ್ಕಿನಲ್ಲಿ ಮೋಡದಂತೆ ಕಾಣಿಸಿ ಕೊಂಡು ಸ್ವಲ್ಪಹೊತ್ತಿನಲ್ಲಿಯೇ ಅದು ದೋಣಿಯ ಬಳಿಗೇ ಚಲಿಸಲಾರಂಭಿಸಿತು. ಆಗ ಹುಟ್ಟುಬಗೆಯುತ್ತಿದ್ದ ಒಬ್ಬ ನಾವಿಕನ ಕೈಗೆ ಒಂದು ಬಾಣವು ನಟ್ಟು ಅವನು ತನ್ನ ಕೆಲಸವನ್ನು ನಿಲ್ಲಿಸಿಬಿಡುವಂತಾಯಿತು. ಈ ಹೊತ್ತಿಗೆ ಸರಿಯಾಗಿ ಮೋಡ ದಂತೆ ಕಾಣುತ್ತಿದ್ದುದು ನಾವಿಕರ ತಲೆಯ ಮೇಲ್ಗಡೆಯಲ್ಲಿ ಪಕ್ಷಿಗಳ ಹಿಂಡೆಂದು ಕಂಡುಬಂದಿತು. ಈ ಸಮಯದಲ್ಲಿ ಆ ಪಕ್ಷಿಗಳಿಂದ ತಂಡತಂಡವಾಗಿ ಕಂಚಿನ ಗರಿಗಳು ಉದಿರಲಾರಂಭವಾಗಿ, ಇನ್ನೂ ಅನೇಕ ನಾವಿಕರಿಗೆ ಗಾಯಗಳಾದುವು. ಇದರಿಂದ ಅವರಲ್ಲಿ ಕಾತರವು ಹೆಚ್ಚಿ ಆ ನಾವೆಗೆ ಅಪಾಯವು ಸಂಭವಿಸುವುದರಲ್ಲಿ ದ್ದಿತು. ಆಗ ಜೇಸನ್ನನು ದೋಣಿಯ ಬೊಂಬೆಯನ್ನು ಪ್ರಶ್ನಿಸಲು, ನಾವಿಕರಲ್ಲಿ ಅರೆವಾಸಿಯಷ್ಟುಮಂದಿ ಅದನ್ನು ನಡೆಯಿಸುವ ಕಾರ್ಯವನ್ನು ಮಾಡಬೇಕೆಂದೂ, ಮತ್ತೆ ಅರೆವಾಸಿ ಜನರು ತಮ್ಮ ತಮ್ಮ ಗುರಾಣಿಗಳನ್ನು ಬಾಣಗಳಿಂದ ಬಡಿದು ಪಕ್ಷಿಗಳನ್ನು ಹೆದರಿಸಬೇಕೆಂದೂ ಅದು ತಿಳಿಸಿತು. ನಾವಿಕರು ಅದೇ ಮೇರೆಗೆ ಮಾಡಲು ಕಂಚಿನಗರಿಯ ಪಕ್ಷಿಗಳು ಗುರಾಣಿಗಳ ಆ ಧ್ವನಿಯನ್ನು ಕೇಳಿ ಭಯ ಭ್ರಾಂತವಾಗಿ ಹಾರಿಹೋದುವು. ಆ ನಾವಿಕರಲ್ಲಿ ಒಬ್ಬನು ಆ ಪಕ್ಷಿಗಳ ವಿಚಾರ ವಾಗಿ ತನ್ನ ಸಂಗಡಿಗರನ್ನು ಕುರಿತು—"ಥೆಸ್ಸಲಿಗೆ ದಕ್ಷಿಣದಲ್ಲಿ ಆರ್ಕೇಡಿಯ ಎಂಬ ರಾಜ್ಯವಿರುವುದಷ್ಟೆ! ಹಿಂದೆ ಈ ಹಕ್ಕಿಗಳು ಆರ್ಕೇಡಿಯದ ಒಂದು ಸರೋ ವರದ ತೀರದಲ್ಲಿ ವಾಸವಾಗಿದ್ದುವು. ಈಗ ಇವು ಈ ಸಮುದ್ರದಲ್ಲಿ ಪ್ರಯಾಣ ಮಾಡುವ ನಾವಿಕರಿಗೆ ಬಹಳ ತೊಂದರೆಕೊಡುತ್ತಿರುವುವು" ಎಂದು ಹೇಳಿದನು. ಇಂತಹ ಪಕ್ಷಿಗಳನ್ನು ಹೆರ್ಕ್ಯಾಕ್ಲಸ್ಸನು ಆ ಸರೋವರದ ಸಮೀಪದಲ್ಲಿ ನಿರ್ಮೂಲ ಅಲ್ಲಿ ವಾಸಿಸುತ್ತಿದ್ದವರ ಕಷ್ಟವನ್ನು ತಪ್ಪಿಸಿದನು.*

೭೮. ಮತ್ತೆ ಕೆಲವು ದಿನ ಪ್ರಯಾಣಮಾಡಿದ ಬಳಿಕ ಕಪ್ಪನೆಯ ಹೊಗೆಯು ದಟ್ಟವಾಗಿ ಏಳುತ್ತಿದ್ದ ಒಂದು ಪ್ರದೇಶವು ನಾವಿಕರಿಗೆ ಗೋಚರ ವಾಯಿತು. ಆ ಸ್ಥಳದಲ್ಲಿ ಸಾವಿರಾರು ಕೊಡತಿಗಳನ್ನು ಅಡಿಗಲ್ಲುಗಳ ಮೇಲೆ ಹೊಡೆಯುತ್ತಿದ್ದ ಶಬ್ದವು ಕೇಳಿಸಿತು. ಹಡಗಿನಲ್ಲಿದ್ದವರಲ್ಲೊಬ್ಬನು—"ಇಲ್ಲಿ ಕಬ್ಬಿಣದ ಗಣಿಗಳು ಬಹಳವಾಗಿರುವುವು. ಹೆಫೆಸ್ಟಸ್ಸಿನ ಭಕ್ತರು ಇಲ್ಲಿ ಕಬ್ಬಿಣ ದಿಂದ ಅನೇಕವಿಧವಾದ ಆಯುಧಗಳನ್ನು ರಾತ್ರಿಯೂ ಹಗಲೂ ಸಿದ್ಧಪಡಿಸುತ್ತ

* "ಯವನಮಹಾವೀರ ಚರಿತೆ" ಯ ೮ ನೆಯ ಅಧ್ಯಾಯವನ್ನು ನೋಡಿ.

ಲಿರುವರು. ಈ ಪ್ರದೇಶಕ್ಕೆ ಪೂರ್ವದಲ್ಲಿ ಸ್ವಲ್ಪ ದೂರದಲ್ಲಿಯೇ ಕಾಲ್ಬಿಸ್ ಇರುವುದು ಎಂದು ನಮ್ಮ ತಂದೆಯುವರು ಹಿಂದೆ ಒಂದುಸಾರಿ ತಿಳಿಸಿದ್ದರು" ಎಂದು ಹೇಳಿದನು. ಕಾಲ್ಬಿಸ್ ರಾಜ್ಯವು ಸಮೀಪವಾಯಿತೆಂದು ಕೇಳಿದಕೂಡಲೆ ನಾವಿಕರೆಲ್ಲರಿಗೂ ಪರಮಾನಂದವಾಯಿತು; ಏಕೆಂದರೆ—ಕನಕೋರ್ಣವು ಇದ್ದುದು ಈ ನಾಡಿನಲ್ಲಿಯೇ.

## ಹದಿಮೂರನೆಯ ಪ್ರಕರಣ.

### ಕನಕೋರ್ಣದ ನಾಡೂ; ನಾವಿಕರ ಎರಡನೆಯ ಸಂಮೋಹವೂ

ನಾವಿಕರು ಬಹಳ ಸಂತೋಷದಿಂದ ತಮ್ಮ ದೋಣಿಯನ್ನು ನಡೆಯಿಸಿಕೊಂಡು ಹೋದರು. ಆ ದಿನದ ಸಂಜೆಯ ಹೊತ್ತಿಗೆ ಒಂದು ದ್ವೀಪವು ಅವರಿಗೆ ಗೋಚರವಾಯಿತು. ಸಮುದ್ರತೀರದಲ್ಲಿ ಇಬ್ಬರು ತರುಣರು ನಿಂತಿದ್ದರು, ನೋಡಲು ಅವರು ಲಕ್ಷಣವಾಗಿದ್ದರೂ, ವಸ್ತ್ರವಿಹೀನರಾಗಿದ್ದರು. ನಾವಿಕರು ಅವರಿಗೆ ವಸ್ತ್ರಗಳನ್ನು ಕೊಟ್ಟು ಅವರನ್ನು ಕುರಿತು—"ನೀವು ಯಾರು? ಇದೇಕೆ ಹೀಗಿರುವಿರಿ?" ಎಂದು ಕೇಳಿದರು. ಅದಕ್ಕೆ ಅವರು 'ನಾವು ಫ್ರಿಕ್ಸಸ್ಸಿನ ಮಕ್ಕಳು; ನಮ್ಮ ತಾಯಿಯ ತಂದೆಯಾದ ಎಯಿಟೀಸನು ಕನಕೋರ್ಣದಮೇಲಣ ದುರಾಶೆಯಿಂದ ನಮ್ಮ ತಂದೆಯನ್ನು ಕೊಲ್ಲಿಸಿ, ನಮ್ಮ ತಂದೆಯ ತಂದೆಯಾದ ಅಥಾಮಸ್ಸಿನ ಬಳಿಗೆ ನಮ್ಮನ್ನು ಕಳುಹಿಸಿಕೊಡುವ ನೆವದಿಂದ ನಿರ್ಜನವಾದ ಈ ದ್ವೀಪದಲ್ಲಿ ನಮ್ಮನ್ನು ಬಿಡಿಸಿಬಿಟ್ಟನು. ಕನಕೋರ್ಣಕ್ಕೆ ಮತ್ತೆಯಾರೂ ಬಾಧ್ಯಸ್ಥರಿರಬಾರದೆಂಬುದೇ ಅವನು ಹೀಗೆ ನಿಷ್ಕರುಣೆಯಿಂದ ನಡೆದುಕೊಂಡುದಕ್ಕೆ ಕಾರಣವು ಅನೇಕವರುಷಗಳಿಂದ ಈ ದ್ವೀಪಕ್ಕೆ ಯಾವುದಾದರೂ ಹಡಗು ಬಂದೀತೇ ಎಂದು ಇದಿರುನೋಡುತ್ತಿದ್ದೆವು; ನೀವು ಗ್ರೀಕರಂತೆ ತೋರುವಿರಿ; ನಮ್ಮನ್ನು ಗ್ರೀಸಿಗೆ ಕರೆದುಕೊಂಡು ಹೋಗಿ ಬಿಟ್ಟರೆ ಬಹಳ ಉಪಕಾರವಾಗುವುದು" ಎಂದು ಉತ್ತರ ಕೊಟ್ಟರು. ನಾವಿಕರು ತಮ್ಮ ಪ್ರಯಾಣದ ಉದ್ದೇಶವನ್ನು ಅವರಿಗೆ ತಿಳಿಸಿ ತಮ್ಮೊಡನೆ ಅವರೂ ಬರಬಹುದೆಂದು ಹೇಳಿದರು. ಫ್ರಿಕ್ಸಸ್ಸಿನ ಮಕ್ಕಳೂ ಕಾಲ್ಬಿಸ್ಸಿಗೆ ದಾರಿಯನ್ನು ತೋರಿಸುತ್ತ ನಾವಿಕರೊಡನೆಯೇ ಹೊರಟರು.

೮೦. ಮೂರನೆಯ ದಿನ ಮಧ್ಯಾಹ್ನಸಮಯದಲ್ಲಿ ಎತ್ತರವಾದ ಕೆಲವು ಪರ್ವತಶಿಖರಗಳು ಗೋಚರವಾದುವು. ಅವುಗಳಲ್ಲಿ ಎರಡು ಬಹಳ ಎತ್ತರವಾಗಿ

ಡ್ಡವು ಇವುಗಳ ನಡುವೆ ಕಪ್ಪನೆಯ ಮೇಘದಂತಿದ್ದ ಒಂದು ವಸ್ತುವು ಕೆಳಕ್ಕೆ ದೊಪ್ಪನೆ ಹಾರಿಬಂದಿತು. ಮತ್ತೆ ಒಂದೆರಡು ಕ್ಷಣಗಳಾದಮೇಲೆ ಭಯಂಕರ ವಾದ ವೇದನಾಧ್ವನಿಯೂ ಕೇಳಿಸಿತು. ಅದನ್ನು ಕೇಳಿದ ಕೂಡಲೆ ನಾವಿಕರಲ್ಲಿ ಅನೇಕರಿಗೆ ಹೆದರಿಕೆಯೂ, ಎಲ್ಲರಿಗೂ ಕುತೂಹಲವೂ ಉಂಟಾದುವು. ಅವರು ಫ್ರಿಕಸ್ಸಿನ ಮಕ್ಕಳನ್ನು ಕುರಿತು—' ಈ ಧ್ವನಿಯ ವಿಚಾರವಾಗಿ ನಿಮಗೇನಾದರೂ ತಿಳಿದಿರುವುದೆ ?'' ಎಂದು ಪ್ರಶ್ನಿಸಲು ಅವರು '' ಈ ಧ್ವನಿಯು ಲೋಕೋಪಕಾರಿ ಯಾದ ಪ್ರೊಮಿಥಿಯಸ್ಸಿನದು. ದೇವತೆಗಳಿಗೆ ಮಾತ್ರ ತಿಳಿದಿದ್ದ ಬೆಂಕಿಯ ಉಪ ಯೋಗವನ್ನು ಮನುಷ್ಯರಲ್ಲಿಯೂ ಆತನು ಪ್ರಚಾರಕ್ಕೆ ತಂದುದರಿಂದ, ದೇವತೆ ಗಳಿಗೆ ರೋಷವುಂಟಾಗಿ ಆತನನ್ನು ಆ ಪರ್ವತಗಳ ನಡುವೆ ಇರುವ ಒಂದು ಗಂಡ ಶಿಲೆಗೆ ಸರಪಣಿಯಿಂದ ಬಿಗಿದುಕಟ್ಟಿ, ಪ್ರತಿದಿನವೂ ಅದ್ಭುತಾಕಾರಿಯಾದ ಒಂದು ಹದ್ದು ಅವನ ಯಕೃತ್ತನ್ನು ಒಂದುಸಾರಿ ಕಿತ್ತುತಿನ್ನುವಂತೆ ಶಿಕ್ಷೆಯನ್ನು ವಿಧಿಸಿರು ವರು. ಆ ಹದ್ದು ಕಿತ್ತುತಿನ್ನುವಾಗ ಪ್ರತಿದಿನವೂ ಒಂದುಸಾರಿ ಹೀಗೆ ಪ್ರೊಮಿಥಿ ಯಸ್ಸನು ನರಳುತ್ತ ಅರಚುವನು. ಸುತ್ತಲೂ ಅನೇಕ ಗಾವುದಗಳ ವರೆಗೂ ಈ ಧ್ವನಿಯು ಕೇಳಿಸುವುದು'' ಎಂದು ಉತ್ತರಕೊಟ್ಟನು. ಈ ವೃತ್ತಾಂತವನ್ನು ಕೇಳಿ ನಾವಿಕರು ಬಹಳ ವ್ಯಸನಪಟ್ಟರು. '' ಈತನ ಕಷ್ಟವು ಹೆರ್ಕ್ಯುಕ್ಲಸ್ಸಿಂದ ಕೊನೆಗಾಣುವುದು '' * ಎಂದು ತಾನು ಖೈರನ್ನಿಂದ ಕೇಳಿದ್ದ ವಿಷಯವನ್ನು ಜೇಸ ನ್ನನು ಅವರಿಗೆ ಹೇಳಿದನು.

೮೧. ಹೀಗೆ ಸಂಭಾಷಿಸುತ್ತ ಮುಂದಮುಂದಕ್ಕೆ ಅವರು ಪಯಣಮಾ ಡಿಕೊಂಡು ಬರುತ್ತಿದ್ದಾಗ ಸಾಯಂಕಾಲದ ಹೊತ್ತಿನಲ್ಲಿ ಕೆಲವು ಸೌಧಗಳು ಪೂರ್ವದಿಕ್ಕಿನಲ್ಲಿ ಕಂಡುಬಂದವು. ಇನ್ನು ಸ್ವಲ್ಪದೂರ ಬರಲು, ಆ ಸೌಧಗಳಲ್ಲಿ ಬೆಳಗುತ್ತಿದ್ದ ದೀಪಗಳು ಕಾಣಿಸಿದುವು. ಆ ಕಟ್ಟಡಗಳು ಎಲ್ಲಿಯವೆಂದು ಕೇಳಿದ ಪ್ರಶ್ನೆಗೆ—ಅವೇ ಕಾಲ್ಖಿಸ್ಸಿನ ರಾಜಧಾನಿಯಾದ ಎಯೀ ದ್ವೀಪದವೆಂದು ಉತ್ತರ ಬಂದಿತು. ಸಮುದ್ರತೀರದಲ್ಲಿ ಒಂದು ಕಡೆ ಆ ದೋಣಿಯನ್ನು ನಿಲ್ಲಿಸಿದ ಬಳಿಕ, ಜೇಸನ್ನನೂ ಅವನ ಸಂಗಡಿಗರಲ್ಲಿ ಇಬ್ಬರೂ ಎಯೀಟೀಸಿನ ಅರಮನೆಯನ್ನು ಕುರಿತು ಹೊರಟರು. ಅವರು ಅರಮನೆಗೆ ಸೇರುವಷ್ಟರಲ್ಲಿ—ಗ್ರೀಸಿನಿಂದ ಸುಮಾರು ನಲವತ್ತು ಐವತ್ತು ಮಂದಿ ತರುಣಯೋಧರನ್ನು ಕುಳ್ಳಿರಿಸಿಕೊಂಡು ಒಂದು ದೋಣಿಯು ಬಂದಿರುವುದೆಂದು ರಾಜಭೃತ್ಯರು ವೃತ್ತಾಂತವನ್ನು ಎಯೀಟೀಸಿಗೆ

* ಯವನಮಹಾವೀರಚರಿತೆಯ ೧೪ನೆಯ ಅಧ್ಯಾಯವನ್ನು ನೋಡಿ.

ತಿಳಿಸಿದ್ದರು. ಆದುದರಿಂದ ಆ ರಾಜನು ಜೇಸನ್ ಮೊದಲಾದವರನ್ನು ಇದಿರುಗೊಂಡು ಉಪಚರಿಸಿ ಭೋಜನಕ್ಕೆ ಎಬ್ಬಿಸಿದನು. ಊಟದ ಸಮಯದಲ್ಲಿ ರಾಜನು ಜೇಸನ್ನನ್ನು ಕುರಿತು—"ಗ್ರೀಕ್ ತರುಣರು ನಮ್ಮ ರಾಜ್ಯಕ್ಕೆ ಬಂದು ಅನೇಕ ವರ್ಷಗಳಾದುವು. ನೀವು ಮುಂದೆ ಎಲ್ಲಿಗೆ ಹೋಗಬೇಕಾಗಿರುವುದು?" ಎಂದು ಕೇಳಿದನು. ಅಷ್ಟೊಂದು ಮಂದಿ ಗ್ರೀಕ್ ತರುಣರು ತನ್ನ ರಾಜ್ಯಕ್ಕೆ ಬಂದಿದ್ದುದು ಅವನ ಮನಸ್ಸಿನಲ್ಲಿ ಬಹಳ ಕಳವಳವನ್ನುಂಟುಮಾಡುತ್ತಿದ್ದಿತು. ಅದಕ್ಕೆ ಸರಿಯಾಗಿ ಎಯಿಾಟೀಸಿಗೆ ಹಿಂದಣರಾತ್ರಿಯಲ್ಲಿ ಒಂದು ದುಸ್ಸ್ವಪ್ನವಾಗಿದ್ದಿತು. ಆದುದರಿಂದಲೇ "ನೀವು ಮುಂದೆ ಎಲ್ಲಿಗೆ ಹೋಗಬೇಕಾಗಿರುವುದು?" ಎಂದು ಅವನು ಕೇಳಿದ್ದುದು. ಜೇಸನ್ನನು ವಿನಯದಿಂದ—"ಮಹಾಸ್ವಾಮಿ! ನಾವು ಐಯಾಲ್ಕಾಸ್ ರಾಜ್ಯದಿಂದ ಇಲ್ಲಿಗೇ ಬಂದಿರುವೆವು. ಈಗ ಅಲ್ಲಿ ರಾಜನಾಗಿರುವ ಪೀಲಿಯಾಸನು ಕನಕೋರ್ಣವನ್ನು ತಂದು ತನಗೆ ಒಪ್ಪಿಸಿದರೆ, ಆ ರಾಜ್ಯಕ್ಕೆ ನ್ಯಾಯವಾದ ಬಾಧ್ಯಸ್ಥನಾದ ನನಗೆ ರಾಜ್ಯವನ್ನು ಒಪ್ಪಿಸುವುದಾಗಿ ವಾಗ್ದಾನಮಾಡಿರುವನು. ತಮ್ಮ ಅನುಗ್ರಹದಿಂದ ಕನಕೋರ್ಣವನ್ನು ಸಂಪಾದಿಸಿಕೊಂಡು ಐಯಾಲ್ಕಾಸಿಗೇ ಹಿಂದಿರುಗುವೆವು" ಎಂದು ಉತ್ತರಕೊಟ್ಟನು.

೮೨. ಇದನ್ನು ಕೇಳಿ ಎಯಿಾಟೀಸಿಗೆ ಬಹಳ ಕೋಪವುಂಟಾಯಿತು. ಆದರೆ ಅವನೂ ಪೀಲಿಯಾಸಿನಂತೆ ಕುತಂತ್ರಿಯಾಗಿದ್ದುದರಿಂದ ತನ್ನ ಕೋಪವನ್ನು ಮರೆಯಿಸಿಕೊಂಡು "ಓಹೋ! ಕನಕೋರ್ಣವನ್ನು ತೆಗೆದುಕೊಂಡು ಹೋಗಲು ಬಂದಿರುವಿರೇನು? ಆದರೆ ನಿಮಗೆ ತಕ್ಕ ಶಕ್ತಿಸಾಹಸಗಳಿರುವಂತೆ ಕಾಣುವುದಿಲ್ಲವಲ್ಲಾ! ನಿಮ್ಮ ಆಕಾರಲಕ್ಷಣಗಳನ್ನು ನೋಡಿದರೆ, ಇಂತಹ ಅಪಾಯಕರವಾದ ಕಾರ್ಯದಲ್ಲಿ ನೀವು ಪ್ರವರ್ತಿಸಬೇಕೆಂದಿರುವಿರಲ್ಲಾ! ಎಂದು ನನಗೆ ಬಹಳ ದುಃಖವಾಗುತ್ತಿರುವುದು. ಕನಕೋರ್ಣವನ್ನು ತೆಗೆದುಕೊಂಡು ಹೋಗಬೇಕೆಂದು ಯತ್ನಿಸಿ, ಅದ್ಭುತವಾದ ಶಕ್ತಿಯುಕ್ತಿಪರಾಕ್ರಮಗಳನ್ನು ಹೊಂದಿದ್ದ ನೂರಾರು ಮಂದಿ ರಾಜಪುತ್ರರು ನನ್ನ ಎತ್ತುಗಳ ಉಸಿರಿನಿಂದ ಕರಿಕಾಗಿಹೋದರು. ಕನಕೋರ್ಣವನ್ನು ಸಂಪಾದಿಸಬೇಕಾದರೆ, ಅಸಾಧ್ಯವಾದ ಮೂರು ಕೆಲಸಗಳನ್ನು ಮಾಡಬೇಕಾಗಿರುವುದು. ನನ್ನಲ್ಲಿರುವ ಅದ್ಭುತವಾದ ಎರಡು ಎತ್ತುಗಳನ್ನೂ ವಶಪಡಿಸಿಕೊಂಡು ಅವಕ್ಕೆ ನೊಗವನ್ನು ಕಟ್ಟಿ, ಬಹಳ ವಿಸ್ತಾರವಾಗಿರುವ ಅರೆಯ ನೆಲವನ್ನು ಒಂದೇಸಲಕ್ಕೆ ಚೆನ್ನಾಗಿ ಉತ್ತು, ನಾನು ಕೊಡುವ ಅದ್ಭುತವಾದ ಬಿತ್ತಗಳನ್ನು ಬಿತ್ತಿ, ಅವುಗಳಿಂದ ಹುಟ್ಟುವ ಫಲವನ್ನು ನೀನೊಬ್ಬನೇ ಅನುಭವಿಸ

ಬೇಕು. ಈವರೆಗೂ ನೂರಾರುಮಂದಿ ಶೂರರು ಬಂದು ವ್ಯರ್ಥವಾಗಿ ಯತ್ನಿಸಿ ಸನ್ನ ಆ ಗೂಳಿಗಳ ಉಸಿರಿಗೆ ಗುರಿಯಾಗಿ ಕರಿಕಾಗಿಹೋಗಿರುವರು ಅಥವಾ ಸುಟ್ಟು ಭಸ್ಮವಾಗಿ ಹೋಗಿರುವರು. ಕೆಲವರು ಮಾತ್ರ ಅವನ್ನು ವಶಪಡಿಸಿಕೊಂಡು ಬೀಜಗಳನ್ನು ಬಿತ್ತಿ, ನೆಲದಿಂದ ಹುಟ್ಟಿದ ಯೋಧರ ಆಯುಧಗಳಿಗೆ ಬಲಿಯಾಗಿ ಹೋಗಿರುವರು. ಚಿನ್ನದ ತುಬಟವನ್ನು ಕಾಯುತ್ತಿರುವ ಒಂದು ಅದ್ಭುತ ಪ್ರಾಣಿಯ ಬಳಿಗೆ ಈವರೆಗೂ ಒಬ್ಬರಾದರೂ ಹೋಗಲಿಲ್ಲ. ಆದುದರಿಂದ ಆ ಬಡ ಪ್ರಾಣಿಗೆ ಆಹಾರವು ದೊರೆಯದೆ ಹಸಿದಿರುವುದು. ಕರಿಕಾಗುವ ಪುಣ್ಯವೂ, ಛಿದ್ರವಾಗುವ ಭಾಗ್ಯವೂ ನಿನಗೆ ಇಲ್ಲದಿದ್ದರೆ, ನೀನೂ ನಿನ್ನ ಜೊತೆಗಾರರೂ ಅದಕ್ಕೆ ಸವಿಯಾದ ಒಂದೆರಡು ಗುಟುಕಾಗುವಿರಿ. ಪುಷ್ಟಿಯಾಗಿ ಬಳೆದಿರುವ ನೀವುಗಳು ಆ ಬಡಪ್ರಾಣಿಯಮೇಲೆ ಇಷ್ಟು ಕರುಣವಿಟ್ಟು ಬಂದಿರುವಾಗ, ನಾನು ಅನುಗ್ರಹಿಸದಿರುವುದು ಹೇಗೆ ಸಾಧ್ಯ! ...................'' ಹೀಗೆ ರಾಜನು ಜೇಸನ್ನಿನೊಡನೆ ಮಾರ್ಮಿಕರೀತಿಯಿಂದ ಮಾತನಾಡುತ್ತಿದ್ದನು.

೮೩. ಈ ಸಮಯದಲ್ಲಿ ಅವನ ಹತ್ತಿರ ಇಬ್ಬರು ರಾಜಪುತ್ರಿಯರು ನಿಂತಿದ್ದರು. ಅವರಲ್ಲಿ ಒಬ್ಬಳು ಎಯಿಟೀಸಿನ ಹಿರಿಯಮಗಳೂ, ಫ್ರಿಕ್ಸಸ್ಸಿನ ಪತ್ನಿಯೂ ಆದ ಖಾಲ್ಸಿಯೋಪಿ; ಅವಳ ಮುಖದಮೇಲೆ ಶೋಕದ ಚಿಹ್ನೆಗಳೂ, ಅನುತಾಪದ ಲಕ್ಷಣಗಳೂ ಕಂಡುಬರುತ್ತಿದ್ದುವು; ಮತ್ತೊಬ್ಬಳು ಖಾಲ್ಸಿಯೋಪಿಗಿಂತಲೂ ಕಪ್ಪನೆಯವಳು; ವಯಸ್ಸು ಅಷ್ಟಾಗಿರಲಿಲ್ಲ. ಅವಳ ಮುಖದಮೇಲೆ ಒಂದುಬಗೆಯ ಅಪೂರ್ವತೇಜಸ್ಸು ಕಂಡುಬರುತ್ತಿದ್ದಿತು. ಅವಳ ಕಣ್ಣುಗಳಿಂದ ಅದ್ಭುತವಾದ ಕಾಂತಿಯು ಹೊರಡುತ್ತಿದ್ದಿತು. ಅವಳ ಮುಖಲಕ್ಷಣಗಳಿಂದ ಅವಳಿಗೆ ಅಪಾರವಾದ ತಿಳಿವಳಿಕೆಯಿದ್ದಿತೆಂದು ಕಾಣುತ್ತಿದ್ದಿತು. ಆಕೆಯ ಹೆಸರು ಮಿಾಡಿಯಾ. ಜೇಸನ್ನನು ರಾಜನೊಡನೆ ಮಾತನಾಡುತ್ತಿದ್ದಾಗ ಮಿಾಡಿಯಾ ಅವನ ಮುಖವನ್ನೇ ನೋಡುತ್ತ ನಿಂತಿದ್ದಳು. ರಾಜನ ಅಪ್ಪಣೆಯನ್ನು ಪಡೆದು ಅವನು ತನ್ನ ಸ್ನೇಹಿತರ ಬಳಿಗೆ ಹಿಂದಿರುಗುತ್ತಿದ್ದಾಗ, ನಡುದಾರಿಯಲ್ಲಿ "ಜೇಸನ್ ಜೇಸನ್!" ಎಂದು ಕೂಗಿದ ಶಬ್ದವು ಕೇಳಬಂದು ಜೇಸನ್ನನು ತಿರುಗಿನೋಡಲು, ಮಿಾಡಿಯಾ ಹಿಂದೆ ಬರುತ್ತಿದ್ದಳು. ಅದನ್ನು ಕಂಡು ಜೇಸನ್ನನು ನಿಂತುಕೊಂಡನು. ಅವಳು ಅವನಿಗೆ ಸನ್ನೆಮಾಡಿ ಸ್ವಲ್ಪದೂರ ಕರೆದುಕೊಂಡುಹೋಗಿ ಮುಂದೆ ಹೇಳುವ ರೀತಿಯಲ್ಲಿ ಅವನೊಡನೆ ಸಂಭಾಷಿಸಿದಳು.

೮೪. "ಜೇಸನ್! ಈವರೆಗೂ ನೂರಾರುಮಂದಿ ತರುಣರು, ಕನಕೋರ್ಣಾರ್ಜನದ ಕಾರ್ಯದಲ್ಲಿ ತಮ್ಮ ಪ್ರಾಣವನ್ನು ಕಳೆದುಕೊಂಡಿರುವರು. ಅವರಲ್ಲಿ

ಒಬ್ಬರಿಬ್ಬರು ವಿನಾ ಉಳಿದವರೆಲ್ಲರೂ ಎತ್ತುಗಳ ಜ್ವಾಲಾಮಯವಾದ ಉಸಿರಿನಿಂದ ಸುಟ್ಟು ಕರಿಕಾಗಿಹೋದರು. ನಮ್ಮ ತಂದೆಯು ಕನಕೋರ್ಣದ ರಕ್ಷಣೆಗಾಗಿ ತನ್ನ ತಂಗಿಯೂ ಪ್ರಸಿದ್ಧಮಾಟಗಾತಿಯೂ ಆದ ಸರ್ಸಿಯಿಂದ ಈ ಅದ್ಭುತವಾದ ಎತ್ತುಗಳನ್ನೂ, ರೆಕ್ಕೆಯಸರ್ಪದ ಹಲ್ಲುಗಳನ್ನೂ ಬಹುಕ್ರೂರವಾದ ಒಂದು ರೆಕ್ಕೆಯ ಸರ್ಪವನ್ನೂ ಸಂಪಾದಿಸಿರುವನು. ಕನಕೋರ್ಣವು ಅನ್ಯರ ಕೈಸೇರಿದ ಕೆಲವು ದಿನಗಳಲ್ಲಿಯೇ ಅವನಿಗೆ ರಾಜ್ಯನಾಶವೂ ಮರಣವೂ ಉಂಟಾಗುವುವೆಂದು ದೇವತೆಗಳ ಶಾಪವಿರುವುದರಿಂದ ನಮ್ಮ ತಂದೆಯು ಇಷ್ಟೊಂದು ಪ್ರಬಲವಾದ ಸಾಧನಗಳನ್ನು ಸಂಪಾದಿಸಿಕೊಂಡಿರುವನು. ರೆಕ್ಕೆಯಸರ್ಪದ ಹಲ್ಲುಗಳನ್ನು ಬಿತ್ತಿದ ಕೂಡಲೆ ಪ್ರತಿಯೊಂದು ಹಲ್ಲಿಗೂ ಒಬ್ಬೊಬ್ಬನಂತೆ ಕವಚಶೀರ್ಷಕಶಸ್ತ್ರಧಾರಿಯಾದ ಒಬ್ಬೊಬ್ಬ ಯೋಧನು ಹುಟ್ಟುವನು. ಅವರೆಲ್ಲರೂ ಬಿತ್ತಿದವನಮೇಲೆ ಸುಗ್ಗಿಬಂದು ಅವನನ್ನು ಛಿದ್ರಛಿದ್ರವಾಗಿ ಕತ್ತರಿಸಿಹಾಕಿಬಿಡುವರು. ಇದುವರೆಗೂ ಒಬ್ಬರಿಬ್ಬರು ಮಾತ್ರ ಹಲ್ಲುಗಳನ್ನು ಬಿತ್ತುವವರೆಗೂ ಜಯಶಾಲಿಗಳಾಗಿದ್ದು ಅವರೂ ಅದ್ಭುತವಾದ ಆ ಯೋಧರ ಕತ್ತಿಗಳಿಗೆ ಬಲಿಯಾಗಿಹೋಗಿರುವರು. ನಿನ್ನನ್ನು ನೋಡಿದರೆ ಬಹಳ ಶೂರನಂತೆ ಕಾಣುವೆ. ಒಂದುವೇಳೆ ನೀನು ಆ ಯೋಧರುಗಳೆಲ್ಲರನ್ನೂ ಜಯಿಸಿದರೂ, ನೀನು ರೆಕ್ಕೆಯಸರ್ಪದ ಬಾಯಿಗೆ ತುತ್ತಾಗುವುದರಲ್ಲಿ ನನಗೆ ಏನೇನೂ ಸಂಶಯವಿಲ್ಲ. ಆದುದರಿಂದ ನೀನು ದುಡುಕದೆ, ನಿನ್ನ ಸಂಗಡಿಗರೆಲ್ಲರೊಡನೆಯೂ ಚೆನ್ನಾಗಿ ಆಲೋಚಿಸಿ ನನಗೆ ಮಧ್ಯರಾತ್ರಿಯಲ್ಲಿ ನಿಮ್ಮ ನಿರ್ಣಯವನ್ನು ತಿಳಿಸು. ನಾನು ನಿಮ್ಮ ನಾವೆಯನ್ನು ನಿಲ್ಲಿಸಿರುವ ಬಳಿಯಣ ತೋಪಿಗೆ ಬರುವೆನು" ಎಂದು ಹೇಳಿ ಮೀಡಿಯಾ ಹಿಂದಿರುಗಿದಳು.

೮೫. ಜೇಸನ್ನನೂ ಹಡಗಿನ ಬಳಿಗೆ ಹಿಂದಿರುಗಿ ತಾನು ಕಂಡು ಕೇಳಿದ್ದ ವೃತ್ತಾಂತವನ್ನೆಲ್ಲಾ ಆಮೂಲಾಗ್ರವಾಗಿ ಸಂಗಡಿಗರಿಗೆ ತಿಳಿಸಿ ಅವರ ಅಭಿಪ್ರಾಯವನ್ನು ಕೇಳಿದನು. ಅವರಲ್ಲಿ ಅನೇಕರು ಆ ವೃತ್ತಾಂತವನ್ನು ಕೇಳಿದಕೂಡಲೆ ತಮ್ಮ ಜಯದ ವಿಷಯದಲ್ಲಿ ಸಂಶಯಪಟ್ಟುಕೊಂಡರು. ಆದರೂ ತಮ್ಮ ಸಂಶಯವನ್ನು ಬಹಿರಂಗಪಡಿಸಿದರೆ ಅವಮಾನವಾದೀತೆಂದು ಅವರಲ್ಲನೇಕರು ಮೌನವಾಗಿದ್ದರು. ಒಬ್ಬರಿಬ್ಬರು ಮಾತ್ರ ಕನಕೋರ್ಣವನ್ನು ಸಾಧಿಸುವುದೇ ಸರಿಯೆಂದು ಅಭಿಪ್ರಾಯಪಟ್ಟರು. ಜೇಸನ್ನಿಗಂತೂ ಎಯೀಟೀಸನೂ ಮೀಡಿಯಳೂ ವಿವರಿಸಿದ್ದ ವರ್ಣನೆಗಳಿಂದ ಸ್ವಲ್ಪವಾದರೂ ಭಯವಾಗಿರಲಿಲ್ಲ. ಆದರೂ "ಮಾಯಾಬಲದ ಮುಂದೆ ಕಾಯಶಕ್ತಿಯು ಕೆಂದುವುದೆ?" ಎಂಬ ಸಂಶಯವು ಅವನ ಮನಸ್ಸಿ

ಸಲ್ಲಿಯೂ ಅನೇಕವೇಳೆ ಹೊಳೆದಿದ್ದಿತು. ಇಂತಹ ಸಮಯದಲ್ಲಿ ಅವನ ಸಂಗಡಿಗರಲ್ಲಿ ಕೆಲವರು ತಮ್ಮ ಅಂತರ್ಯಾಭಿಪ್ರಾಯವನ್ನು ಸ್ವಲ್ಪಮಟ್ಟಿಗೆ ವ್ಯಕ್ತಪಡಿಸಿದ್ದರೂ, ದಾಕ್ಷಿಣ್ಯಪರನಾದ ಜೇಸನ್ನಿನ ಮನಸ್ಸೂ ಸಹ ಹೇಗೆ ಮಾರ್ಪಡುತ್ತಿದ್ದಿತೋ ಹೇಳುವುದು ಪ್ರಯಾಸವೆಂದು ತೋರುವುದು. ಏಕೆಂದರೆ ಸಂಶಯಗ್ರಸ್ತರಾದ ಹಲವರ ನಡುವೆ ಇರುವ ದೃಢಜ್ಞಾನಿಗಳಾದ ಕೆಲವರೂ ಸಹ ಸಂಶಯಕ್ಕೊಳಗಾಗುವುದು ಸ್ವಾಭಾವಿಕವೇ.

# ಹದಿನಾಲ್ಕನೆಯ ಪ್ರಕರಣ.

## ಅದ್ಭುತವಾದ ಆರಂಬ.

೮೬. ಕಡೆಗೆ ಜೇಸನ್ನನು ಕನಕೋರ್ಣವನ್ನು ಸಾಧಿಸಿಕೊಂಡೇ ಬರುವುದು ಸರಿಯೆಂದು ತನ್ನ ಸಂಗಡಿಗರಿಗೆ ಉತ್ಸಾಹಪೂರ್ವಕವಾಗಿ ತಿಳಿಸಿ ಮಧ್ಯರಾತ್ರಿಯಾಗುವುದನ್ನೇ ನಿರೀಕ್ಷಿಸುತ್ತಿದ್ದನು. ತಕ್ಕ ಸಮಯದಲ್ಲಿ, ಹಿಂದೆಯೇ ನಿಯಾಮಕವಾಗಿದ್ದ ತೋಪಿನ ಬಳಿಗೆ ಅವನು ಒಂಟಿಯಾಗಿ ಹೋದನು. ಅದೇ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಮೀಡಿಯಳೂ ಬಂದು "ಜೇಸನ್! ನೀವೆಲ್ಲರೂ ಹೇಗೆ ನಿರ್ಧರಮಾಡಿರುವಿರಿ!" ಎಂದು ಕೇಳಿದಳು. ಅದಕ್ಕೆ ಜೇಸನ್ನನು—"ರಾಜಪುತ್ರಿ! ನಾನು ಈ ಕಾರ್ಯವನ್ನು ಸಾಧಿಸಿಕೊಂಡು ಬರುವೆನೆಂದು ಗ್ರೀಸಿನಲ್ಲೆಲ್ಲಾ ಪ್ರಕಟಪಡಿಸಿ ಅನೇಕ ಶೂರರುಗಳನ್ನು ಕರೆದುಕೊಂಡು ಬಂದು ಹಾಗೆಯೇ ಹಿಂದಿರುಗುವುದಕ್ಕಿಂತ, ಹಿಂದೆ ಇಂತಹ ಪ್ರಯತ್ನದಲ್ಲಿ ನಾಶವಾದ ಅನೇಕರಂತೆ ನಾವೂ ನಾಶವಾಗುವುದೇ ಸರಿ. ಮಾನಕ್ಕಿಂತಲೂ ಪ್ರಾಣವೆಂದಿಗೂ ಹೆಚ್ಚಲ್ಲ. ಸಾಹಸವನ್ನು ಕೈಕೊಳ್ಳದಿದ್ದರೆ ಮಂಗಳಗಳುಂಟಾಗಲಾರವಲ್ಲವೆ? ಆದುದರಿಂದ ಯಾರು ಎಷ್ಟು ಹೇಳಿದರೂ ನಾವು ಈ ಕಾರ್ಯದಲ್ಲಿ ಹಿಂದೆಗೆಯಲಾರೆವು" ಎಂದು ನಿರ್ಧರಧ್ವನಿಯಿಂದ ತಿಳಿಸಿದನು.

೮೭. ಈ ಮಾತುಗಳನ್ನು ಕೇಳಿ ಮೀಡಿಯಳು ಬಹಳ ಸಂತೋಷಪಟ್ಟಳು. ಜೇಸನ್ನನ್ನು ಪರೀಕ್ಷಿಸಬೇಕೆಂದೇ ಹಿಂದೆ ತಿಳಿಸಿದ ರೀತಿಯಲ್ಲಿ ಅವಳು ಅವನಿಗೆ ಹೇಳಿದ್ದಳು. ಈಗ ಅವಳು ಜೇಸನ್ನನ್ನು ಕುರಿತು ಪುನಃ "ಜೇಸನ್! ಮಾಯಾಬಲದ ಮೇಲೆ ಮಾನುಷಿಕವಾದ ಕಾಯಶಕ್ತಿಯು ಕೆಂದುವುದೆ? ಎಂಬ

ನಿನ್ನ ಸಂಶಯವು ಸಾಧುವಾದುದು. ಮಾಯಾಶಕ್ತಿಗೆ ಮಾಯಾಶಕ್ತಿಯಿಂದಲೇ ಪ್ರತೀಕಾರವಾಗಬೇಕು. ಸುಮ್ಮನೆ ದುಡುಕಿ ಪ್ರಾಣವನ್ನು ಕಳೆದುಕೊಳ್ಳಬೇಡ. ನನ್ನ ಮಾತನ್ನು ಕೇಳಿದರೆ ನಿನಗೆ ಕನಕೋರ್ಣವು ಸ್ವಾಧೀನವಾಗುವುದು. ನನ್ನ ಅದ್ಭುತಶಕ್ತಿಯ ವಿಷಯವಾಗಿ ದೋಣಿಯಲ್ಲಿರುವ ನಮ್ಮ ಅಕ್ಕನ ಮಕ್ಕಳನ್ನು ವಿಚಾರಿಸಿದರೆ ನಿನಗೆ ನಂಬಿಕೆಯುಂಟಾಗುವುದು. ನಿನಗೆ ನಂಬಿಕೆಯನ್ನುಂಟುಮಾಡಲು ಮತ್ತೊಂದು ನಿದರ್ಶನವನ್ನೂ ಕೊಡುವೆನು. ಈ ಭರಣಿಯಲ್ಲಿರುವ ತೈಲವನ್ನು ಮೈಗೆಲ್ಲಾ ಲೇಪಿಸಿಕೊಂಡರೆ, ನಿನ್ನನ್ನು ಬೆಂಕಿಯಾಗಲಿ, ಯಾವ ಆಯುಧವೇ ಆಗಲಿ ಒಂದು ದಿನದವುಟ್ಟಿಗೆ ಬಾಧಿಸಲಾರದು. ನನ್ನ ಸಾಹಾಯ್ಯವು ನಿನಗೆ ಬೇಕಾಗಿದ್ದಲ್ಲಿ, ನೀನು ಒಬ್ಬನೇ ಬೆಳಕು ಹರಿವುದಕ್ಕೆ ಮುಂಚೆ ಪುರದ ಹೊರಗಿರುವ ಹುಲ್ಲುಗಾವಲಿನ ಬಳಿಯಿರುವ ಬ್ರೈಮೋ ದೇವಸ್ಥಾನಕ್ಕೆ ಬಾ. ಹೊತ್ತುಮೀರಿ ಬಂದರೆ, ಜನರು ಹುಲ್ಲುಗಾವಲಿನ ಬಳಿ ನಾಳೆ ನಡೆಯುವ ವಿನೋದವನ್ನು ನೋಡಲು ಎಂದಿನಂತೆ ಕಿಕ್ಕಿರಿದು ತುಂಬಿಕೊಂಡುಬಿಟ್ಟಿರುವರು ; ನೀನು ಏನು ಮಾಡಬೇಕಾಗಿರುವುದೋ ಅದನ್ನು ತಿಳಿಸಲು ನನಗೆ ಅವಕಾಶವು ದೊರೆಯದೆ ಹೋದೀತು ! ಎಚ್ಚರಿಕೆ ! " ಎಂದು ಹೇಳಿ ಹೊರಟುಹೋದಳು.

೮೮. ಜೇಸನ್ನನು ದೋಣಿಗೆ ಹಿಂದಿರುಗಿ ಬಂದು ಮಿಾಡಿಯಳು ಹೇಳಿದ್ದ ಮಾತುಗಳೆಲ್ಲವನ್ನೂ ತನ್ನ ಸಂಗಡಿಗರೊಡನೆ ಹೇಳಲಾಗಿ ಅವರಲ್ಲಿ ಕೆಲವರು ಮಿಾಡಿಯಳನ್ನು ನಂಬಕೂಡದೆಂದು ವಾದಿಸಿದರು. ಆಕೆಯ ನಂಬಿಕೆಗೆ ನಿದರ್ಶನವಾದ ತೈಲವು ಕೈಯಲ್ಲೇ ಇರುವಾಗ, ವಾದದಿಂದ ಏನು ಪ್ರಯೋಜನವೆಂದು ಹೇಳಿ, ಜೇಸನ್ನನು ಆ ತೈಲವನ್ನು ಮೈಗೆ ಸವರಿಕೊಂಡನು. ಕೂಡಲೆ ಜೇಸನ್ನಿಗೆ ನೂರು ಮಂದಿಗಳ ಶಕ್ತಿಯುಂಟಾದಂತೆ ತೋರಿತು. ಆಗ ಅವನು ತನ್ನ ಸಂಗಡಿಗರನ್ನು ಕುರಿತು " ನಿಮ್ಮ ಬಲವನ್ನೆಲ್ಲಾ ಪ್ರಯೋಗಿಸಿ ಆಯುಧಗಳಿಂದ ನನ್ನನ್ನು ಹೊಡೆಯಿರಿ " ಎಂದು ಹೇಳಿದನು. ಅವರು ಅದೇಮೇರೆಗೆ ಮಾಡಿದರೂ ಜೇಸನ್ನಿಗೆ ಸ್ವಲ್ಪವಾದರೂ ಬಾಧೆಯಾಗಲಿಲ್ಲ ; ಒಂದು ಕಡೆಯಾದರೂ ಗಾಯವಾಗಲಿಲ್ಲ ; ಅವನ ಸಂಗಡಿಗರಿಗೆಲ್ಲರಿಗೂ ದಣಿವು ಉಂಟಾದರೂ, ಜೇಸನ್ನಿಗೆ ಮಾತ್ರ ಸ್ವಲ್ಪವೂ ಆಯಾಸವಾಗಲಿಲ್ಲ. ಈ ಆಶ್ಚರ್ಯವನ್ನು ಕಂಡು ಆಗರ್ಗೋ ನಾವಿಕರೆಲ್ಲರಿಗೂ ಮಿಾಡಿಯಳ ಮಾತಿನಲ್ಲಿ ನಂಬಿಕೆಯುಂಟಾಯಿತು. ಆದುದರಿಂದ ಅವರು " ನಿನಗೆ ವಿಜಯವಾಗಲಿ " ಎಂದು ಹರಸಿ ಜೇಸನ್ನನ್ನು ಕಳುಹಿಸಿಕೊಟ್ಟರು. ಅವರೆಲ್ಲರೂ ಕ್ಷಣಮಾತ್ರದಲ್ಲಿ ಯುದ್ಧಮಾಡುವುದಕ್ಕೂ, ಪ್ರಯಾಣ ಹೊರಡುವು

ದಕ್ಕೂ ಸನ್ನದ್ಧರಾಗಿರಬೇಕೆಂದು ಜೇಸನ್ನನು ನಿಯಮಿಸಿ ಬ್ರೈಮೋ ಎಂಬ ದೇವತೆಯ ಗುಡಿಯ ಬಳಿಗೆ ಹೊರಟನು.

೮೯. ಆಗ ಆಕಾಶದಲ್ಲಿ ಇನ್ನೂ ನಕ್ಷತ್ರಗಳು ಚೆನ್ನಾಗಿ ಬೆಳಗುತ್ತಲಿದ್ದುವು; ಗಾಳಿಯು ತಣ್ಣಗೆ ಬೀಸುತ್ತಿದ್ದಿತು; ಕೋಳಿಗಳು ಆಗತಾನೆ ಕೂಗಲು ಮೊದಲುಮಾಡಿದ್ದುವು; ಮರಗಳಮೇಲೆ ಅಲ್ಲೊಂದು ಇಲ್ಲೊಂದರಂತೆ ಕಾಗೆಗಳು ಕಣ್ಣುಬಿಟ್ಟು "ಕಾ" "ಕಾ" ಎಂದು ಅರಚುತ್ತಿದ್ದುವು; ಆದರೂ ಒಂದು ದಿಕ್ಕಿನಲ್ಲಿ ಮಾತ್ರ ಅನೇಕ ಜನರು ಮಾತನಾಡುತ್ತಿದ್ದ ಕೋಲಾಹಲವು ಕೇಳಬರುತ್ತಿದ್ದಿತು. ದೇವಸ್ಥಾನವಿದ್ದುದೂ ಅದೇ ದಿಕ್ಕಿನಲ್ಲಿಯೇ. ಜೇಸನ್ನನು ದೇವಸ್ಥಾನದ ಬಳಿಗೆ ಬಂದಾಗ ಅದರೊಳಗೆ ಭಯಂಕರವಾದ ಮೂರುತಲೆಯ ಒಂದು ವಿಗ್ರಹದ ಸನ್ನಿಧಿಯಲ್ಲಿದ್ದ ಒಂದು ವ್ಯಕ್ತಿಯನ್ನು ಕಂಡನು. ಸ್ವಲ್ಪ ಹೊತ್ತು ನಿಂತು ಆ ವ್ಯಕ್ತಿಯನ್ನು ನೋಡಲು ಅದು ಮೀಡಿಯಳೇ ಎಂದು ಕಂಡು ಬಂದಿತು. ಅವಳು ಜೇಸನ್ನನ್ನು ಸನ್ನೆಯಿಂದ ತನ್ನ ಬಳಿಗೆ ಕರೆದು "ಜೇಸನ್! ನಾನು ತೋರಿಸುತ್ತಿರುವ ಕಡೆ ನೋಡು. ನಾಲ್ಕು ಜ್ವಾಲೆಗಳು ಸ್ವಲ್ಪಹೊತ್ತು ಕಾಣುತ್ತಿದ್ದು ಮಾಯವಾಗಿ ಪುನಃ ಕಾಣಿಸಿಕೊಳ್ಳುತ್ತಿರುವುವಲ್ಲವೆ? ಅವು ಏನೆಂದು ತಿಳಿದಿರುವೆ? ನಮ್ಮ ಸೋದರತ್ತೆಯು ಹೆಫೆಸ್ಟಸ್ಸಿನ ವರದಿಂದ ಪಡೆದುಕೊಂಡು ನಮ್ಮ ತಂದೆಗೆ ಕೊಟ್ಟಿರುವ ಗೂಳಿಗಳು ಅವೇ; ಅವುಗಳ ಗೊರಸುಗಳೂ ಕೊಂಬುಗಳೂ ಕಬ್ಬಿಣದವು; ಶ್ವಾಸಕೋಶಗಳು ಕಂಚಿನವು; ಅವು ಉಸಿರುಬಿಡುವಾಗ ಜ್ವಾಲೆಗಳು ಕಾಣಿಸಿಕೊಳ್ಳುವುವು; ಉಸಿರುತೆಗೆದುಕೊಳ್ಳುವಾಗ ಜ್ವಾಲೆಗಳು ಅದೃಶ್ಯವಾಗುವುವು. ನೀನು ಹುಲ್ಲುಗಾವಲನ್ನು ಪ್ರವೇಶಿಸಿದ ಕೂಡಲೆ ಅವು ನಿನ್ನನ್ನು ತಿವಿಯುವುದಕ್ಕೆ ರಭಸದಿಂದ ಬರುವುವು; ಆಗ ನೀನು ಬೆದರದೆ ಅವುಗಳ ಕೊಂಬುಗಳನ್ನು ಹಿಡಿದುಕೊಂಡುಬಿಟ್ಟರೆ ಅವುಗಳ ಕ್ರೌರ್ಯವೆಲ್ಲಾ ಅಣಗಿಹೋಗುವುದು. ಈ ಗುಟ್ಟನ್ನು ತಿಳಿಯದೆ ಅನೇಕರು ಅಪಾಯಕ್ಕೆ ಸಿಕ್ಕಿ ಪ್ರಾಣಗಳನ್ನು ಕಳೆದುಕೊಂಡಿರುವರು. ಒಂದುವೇಳೆ ಗೂಳಿಗಳು ತಿವಿದರೂ, ನನ್ನ ತೈಲದ ಮಾಹಾತ್ಮ್ಯೆಯಿಂದ ನಿನಗೆ ಬಾಧೆಯೇನೂ ಆಗಲಾರದು. ಬಿತ್ತಿದ ಸ್ವಲ್ಪಹೊತ್ತಿನಲ್ಲೇ ಉದ್ಭವಿಸುವ ಯೋಧರ ನಡುವೆ ಒಂದು ದೊಡ್ಡ ಕಲ್ಲನ್ನು ಎಸೆದುಬಿಟ್ಟು ಏನೋದವನ್ನು ನೋಡುತ್ತಿರು. ಈ ದೇವತೆಗೆ ನಮಸ್ಕರಿಸಿ ಕಾರ್ಯಕ್ಕೆ ಪ್ರವರ್ತಿಸು. ನಾನು ಹೇಳಿರುವುದರಲ್ಲಿ ಯಾವುದನ್ನೂ ಮರೆಯಬೇಡ" ಎಂದು ಬೇಗ ಬೇಗನೆ ಪಿಸುಮಾತಿನಲ್ಲಿ ತಿಳಿಸಿದಳು. ಜೇಸನ್ನನು ಹಾಗೆಯೇ ಆ ದೇವತೆಗೆ ವಂದಿಸಿ ಹುಲ್ಲುಗಾವಲಿನ ಒಂದು ಕಡೆಯಿದ್ದ ಹೆಬ್ಬಾಗಿಲಿನ ಬಳಿಗೆ ಬಂದನು.

೯೦. ಅಷ್ಟುಹೊತ್ತಿಗೆ ಹುಲ್ಲುಗಾವಲ ಸುತ್ತಲೂ ವಿನೋದವನ್ನು ನೋಡಲು, ಜನರು ಕಿಕ್ಕಿರಿದು ತುಂಬಿಕೊಂಡಿದ್ದರು. ಜೇಸನ್ನನು ಹೆಬ್ಬಾಗಿಲ ಬಳಿಗೆ ಬರುವಹೊತ್ತಿಗೆ ಸರಿಯಾಗಿ ಎಯಿಟೀಸನೂ ತನ್ನ ಪರಿವಾರದೊಡನೆ ಬಂದು ಅಲ್ಲಿ ತನಗಾಗಿ ಏರ್ಪಡಿಸಿದ್ದ ಪೀಠದಲ್ಲಿ ಕುಳಿತನು. ಆಸ್ಥಾನಿಕರು ತಮ್ಮ ತಮ್ಮ ಸ್ಥಾನಗಳಲ್ಲಿ ನಿಂತರು. ಮಿಾಡಿಯುಳೂ ಅಲ್ಲಿಗೆ ಬಂದು ತನ್ನ ಸೋದರಿಯ ಪಕ್ಕ ದಲ್ಲಿ ನಿಂತುಕೊಂಡಳು. ಜೇಸನ್ನನು ದೊರೆಗೆ ವಂದಿಸಿ ಹೊಲವನ್ನು ಉಳಲು ರಾಜನ ಅನುಜ್ಞೆಯನ್ನು ಪಡೆದು ಆವರಣದೊಳಗೆ ಕಾಲಿಟ್ಟನು. ಇದನ್ನು ಕಂಡು ಆ ಗೂಳಿಗಳು ರಭಸದಿಂದ ಉಸಿರುಬಿಡುತ್ತ ಜೇಸನ್ನಿನ ಕಡೆಗೆ ನುಗ್ಗಿದುವು. ಹಿಂದೆ ಎಷ್ಟೋಸಾರಿ ಆಗಿದ್ದಂತೆಯೇ ಈಗಲೂ ಆ ನಿರ್ಭಾಗ್ಯಸಾಹಸಿಯು ಕ್ಷಣಮಾತ್ರ ದಲ್ಲಿ ಇದ್ದಿಲಬೊಂಬೆಯಾಗಿಯೋ, ಒಂದುಹಿಡಿ ಬೂದಿಯಾಗಿಯೋ ಆಗಿಹೋಗುವ ನೆಂದು ಜನರೆಲ್ಲರೂ ಭಾವಿಸಿಕೊಂಡು ಅತ್ಯಂತ ಕುತೂಹಲದಿಂದ ಅದನ್ನೇ ನಿರೀ ಕ್ಷಿಸುತ್ತಿದ್ದರು. ಎತ್ತುಗಳು ಸಮಿಾಪಕ್ಕೆ ಬಂದಕೂಡಲೆ ಜೇಸನ್ನನು ಅವುಗಳ ಒಂದೊಂದು ಕೊಂಬನ್ನು ಗಟ್ಟಿಯಾಗಿ ಹಿಡಿದುಕೊಂಡು ಬಿಟ್ಟನು. ಆಗ ಎತ್ತು ಗಳ ಹಾರಾಟವೂ, ಗುಟ್ಟರಗಳೂ, ಜ್ವಾಲೆಗಳೂ ಸ್ವಲ್ಪ ಹೊತ್ತಿನಲ್ಲಿಯೇ ನಿಂತು ಹೋಗಿ, ಅವು ಬಡಕಲು ಎತ್ತುಗಳಂತೆ ಜೇಸನ್ನಿನ ಆಜ್ಞೆಗೆ ಒಳಪಟ್ಟುವು. ಕೂಡಲೆ ಜೇಸನ್ನನು ಹತ್ತಿರವಿದ್ದ ನೇಗಿಲನ್ನು ತೆಗೆದುಕೊಂಡು ಆ ದೊಡ್ಡ ಹೊಲವನ್ನು ಎರಡು ಮೂರು ಗಂಟೆಗಳೊಳಗಾಗಿ ಹಸನಾಗಿ ಉತ್ತು, ಬಿತ್ತಲು ಸಿದ್ಧಪಡಿಸಿ ದನು. ಇದನ್ನು ಕಂಡು ಎಯೀಟೀಸಿಗೆ ಆಶ್ಚರ್ಯಕೋಪಗಳುಂಟಾದುವು. ಜೇಸ ನ್ನನು ಬಿತ್ತನೆಯ ಕಾಳುಗಳನ್ನು ಕೇಳಿ ತೆಗೆದುಕೊಳ್ಳಲು ಬಂದಾಗ, ರಾಜನ ಮನಸ್ಸಿ ನಲ್ಲಿ ಎಂತೆಂತಹ ಕೆಟ್ಟಯೋಚನೆಗಳು ಹುಟ್ಟುತ್ತಿದ್ದುವೆಂಬುದನ್ನು ವಿವರಿಸಿ ತಿಳಿ ಸಲು ಆಗಲಾರದು. ಎಯೀಟೀಸನು ಒಂದು ಕುಕ್ಕೆಯಲ್ಲಿದ್ದ ಹಲ್ಲುಗಳನ್ನು ಜೇಸ ನ್ನಿನ ಕೈಗಳಲ್ಲಿ ರಭಸದಿಂದ ಕುಕ್ಕಿ—'' ಇದರ ಬೆಳೆಯನ್ನೆಲ್ಲಾ ನೀನೇ ಚೆನ್ನಾಗಿ ಅನುಭವಿಸು '' ಎಂದು ಒಂದು ಬಗೆಯ ಸಿಕಾರಧ್ವನಿಯಿಂದ ಹೇಳಿದನು. ಅದರ ಅರ್ಥವನ್ನು ಹೊಸಬನಾದ ಜೇಸನ್ನನು ಅರಿಯನೆಂದು ರಾಜನು ಭಾವಿಸಿದ್ದನು.

೯೧. ಸ್ವಲ್ಪ ಹೊತ್ತಿನಲ್ಲಿಯೇ ಜೇಸನ್ನನು ಆ ಹಲ್ಲುಗಳನ್ನೆಲ್ಲಾ ಓರಣ ದಿಂದ ಬಿತ್ತಿಬಿಟ್ಟು ತನ್ನ ಆಯುಧಗಳನ್ನು ಸರಿಪಡಿಸಿಕೊಳ್ಳುತ್ತ ಮುಂದೆ ಏನಾ ಗುವುದೋ ಎಂದು ನಿರೀಕ್ಷಿಸುತ್ತ ಒಂದು ಅಂಚಿನಲ್ಲಿದ್ದ ಒಂದು ಕಲ್ಲಿನ ಹತ್ತಿರ ನಿಂತಿದ್ದನು. ಪ್ರತಿಯೊಂದು ಹಲ್ಲೂ ಬಿತ್ತಿದ್ದ ಸ್ಥಳದಿಂದಲೂ ಸ್ವಲ್ಪಹೊತ್ತಿ

ನಲ್ಲಿಯೇ ಎರಡೆರಡು, ಮೂರುಮೂರು ಮೊನೆಗಳು ಕಾಣಿಸಿಕೊಂಡುವು. ಅವುಗಳಲ್ಲಿ ಕೆಲವು ಕತ್ತಿಯ ಮೊನೆಗಳಂತೆಯೂ ಮತ್ತೆ ಕೆಲವು ಉಕ್ಕಿನ ಟೋಪಿಯ ಕೊನೆಗಳಂತೆಯೂ, ಮಿಕ್ಕವು ಈಟಿಯ ಅಲಗುಗಳಂತೆಯೂ ತೋರುತ್ತಿದ್ದುವು. ಇನ್ನು ಸ್ವಲ್ಪಹೊತ್ತಿನಲ್ಲಿ ತಲೆಗಳೂ, ಭುಜಗಳೂ, ಎದೆಗಳೂ, ತೊಡೆಗಳೂ, ಪಾದಗಳೂ ಕಾಣಿಸಿಕೊಂಡು ಪ್ರತಿಯೊಂದು ಹಲ್ಲೂ ಬಿದ್ದಿದ್ದ ಸ್ಥಳದಿಂದ ಒಬ್ಬೊಬ್ಬ ಯೋಧನು ಹುಟ್ಟಿ ಗಟ್ಟಿಯಾಗಿ ಆರ್ಭಟಿಸುತ್ತ ಜೇಸನ್ನಿನಮೇಲೆ ಅವರೆಲ್ಲರೂ ಏಕಕಾಲದಲ್ಲಿ ನುಗ್ಗಿದರು. ಅವರು ಇನ್ನೂ ಕೆಲವು ಮಾರುಗಳ ದೂರದಲ್ಲಿದ್ದಾಗಲೇ ಜೇಸನ್ನನು ತನ್ನ ಬಳಿ ಬಿದ್ದಿದ್ದ ದೊಡ್ಡಕಲ್ಲನ್ನು ಎತ್ತಿ ಆ ದುರಾತ್ಮರ ನಡುವೆ ಬೀಳುವಂತೆ ಗುರಿಕಟ್ಟಿ ಎಸೆದನು. ಆ ಕಲ್ಲು ಒಬ್ಬ ಯೋಧನಿಗೆ ತಗುಲಿತು. "ನನ್ನನ್ನು ಏಕೆ ಹೊಡೆದೆ?" ಎನ್ನುತ್ತ ಆ ಯೋಧನು ತನ್ನ ಬಳಿಯಿದ್ದವನನ್ನು ತನ್ನ ಈಟಿಯಿಂದ ತಿವಿದನು. "ಅವನನ್ನೇಕೆ ತಿವಿಯುತ್ತೀಯೆ?" ಎಂದು ಮತ್ತೊಬ್ಬನು ಮೊದಲನೆಯವನನ್ನು ತನ್ನ ಕತ್ತಿಯಿಂದ ಕತ್ತರಿಸಿ ಕೆಡಹಿದನು. ಅವನನ್ನು ಮಗುದೊಬ್ಬನು ಹೊಡೆದು ಮಲಗಿಸಿದನು. ಹೀಗೆ ಕೆಲವು ಕ್ಷಣಗಳಲ್ಲಿ ಆ ಹೊಲದಲ್ಲೆಲ್ಲಾ ಹುಯ್ಲೋ ಹುಯ್ಲು ಆಗಿ ಆ ಯೋಧರುಗಳಲ್ಲಿ ಒಬ್ಬನು ಹೊರತಾಗಿ ಎಲ್ಲರೂ ಸತ್ತುಬಿದ್ದರು. ಉಳಿದಿದ್ದ ಆ ಯೋಧನು ಹೊಲದ ಅಂಚಿನಲ್ಲಿದ್ದ ಜೇಸನ್ನನನ್ನು ನೋಡಿ ಅವನಮೇಲೆ ರಭಸದಿಂದ ನುಗ್ಗಿಬಂದನು. ಅವನನ್ನು ಜೇಸನ್ನನು ಒಂದೇ ಏಟಿಗೆ ಹೊಡೆದು ಮಲಗಿಸಿಬಿಟ್ಟನು. ಬಿರುಗಾಳಿಯಲ್ಲಿ ಚಟಪಟನೆ ಆಲಿಕಲ್ಲುಗಳ ಮಳೆಸುರಿದು ತಟ್ಟನೆ ನಿಂತುಹೋಗುವಂತೆ ಆ ಯೋಧರ ಕಡಿದಾಟವೂ ತೋರುತ್ತಿದ್ದಿತು. ಹೊಲದಲ್ಲೆಲ್ಲಾ ರಕ್ತದ ಕೋಡಿಯು ಹರಿಯುತ್ತಿದ್ದಿತು. ಆಗ ಜೇಸನ್ನಿನ ಮನಸ್ಸಿಗೆ, ಅಲ್ಪಕಾರಣಗಳಿಗಾಗಿ ಯುದ್ಧಮಾಡಿ ಪ್ರಾಣಗಳನ್ನು ಕಳೆದುಕೊಳ್ಳುವ ಮೂರ್ಖರ ಜ್ಞಾಪಕವು ಬಂದಿತು. ಅವನು ರಾಜನ ಬಳಿಗೆ ಬಂದು ನಮಸ್ಕರಿಸಿ ಮುಂದಿನ ಕೆಲಸವನ್ನು ಅಪ್ಪಣೆಮಾಡಬೇಕೆಂದು ಪ್ರಾರ್ಥಿಸಿದನು. ಎಯಿಟೀಸಿನ ಮನಸ್ಸಿನಲ್ಲಿ, ಅಗ್ನಿಪರ್ವತಗಳಿಂದ ಹೊರಡುವ ಶಿಲಾರಸವಾಹಿನಿಯಂತೆ ಭಯಂಕರವಾದ ಆಲೋಚನಾಪ್ರವಾಹವು ಹರಿಯುತ್ತಿದ್ದಿತು. ಆದರೂ ಅವನು ತನ್ನ ಮನೋವಿಕಾರವನ್ನು ಮರೆಯಿಸಿಕೊಂಡು ಮಿಾಡಿಯಳ ಕಡೆಗೆ ವಿಕೃತದೃಷ್ಟಿಯಿಂದ ಒಂದುಸಾರಿ ನೋಡಿ—"ಜೇಸನ್! ನೀನು ಈ ದಿನ ಬಹಳ ಸಾಹಸಮಾಡಿ ದಣಿದುಹೋಗಿರುವೆ. ನಿನ್ನನ್ನು ಮತ್ತೂ ದಣಿಸಲು ನನಗೆ ಇಷ್ಟವಿಲ್ಲ. ಮಿಕ್ಕ ಕೆಲಸವನ್ನು ನಾಳೆ ಮಾಡಬಹುದು. ಈ ದಿನ

ನೀನೂ ನಿನ್ನ ಸಂಗಡಿಗರೂ ಅರಮನೆಗೆ ಬಂದು ನಮ್ಮ ಅತಿಥಿಗಳಾಗಿರಬೇಕು'' ಎಂದು ಕಪಟವಿನಯದಿಂದ ಹೇಳಿ, ಅರಮನೆಯ ಕಡೆಗೆ ತನ್ನ ಪರಿವಾರ ಸಹಿತ ವಾಗಿ ಹೊರಟನು.

# ಹದಿನೈದನೆಯ ಪ್ರಕರಣ.

## ಕನಕೋರ್ಣಾರ್ಜನವೂ ಪಲಾಯನವೂ.

೯೨. ಅಂದಿನ ಔತಣವು ಬಲು ವಿಜೃಂಭಣೆಯಿಂದ ನಡೆಯಿತು. ಅದಕ್ಕೆ ಆರ್ಗೋನಾವಿಕರೆಲ್ಲರೂ ಬಂದಿದ್ದರು. ಎಯಿಟೀಸನು ಅವರೆಲ್ಲರನ್ನೂ ಬಹಳ ಚೆನ್ನಾಗಿ ಆದರಿಸಿದನು. ಆದರೆ ಅವನ ಆಂತರ್ಯವು ಮಿಾಡಿಯಳಿಗೆ ಚೆನ್ನಾಗಿ ತಿಳಿದಿದ್ದಿತು. ನಾವಿಕರನ್ನು ನಂಬಿಸಿ ಅವರೆಲ್ಲರನ್ನೂ ಮಾರನೆಯದಿನ ಕೊಲ್ಲಿಸಿಬಿಡಬೇಕೆಂದು ದುರಾತ್ಮನಾದ ಆ ರಾಜನು ನಿರ್ಧರಿಸಿಕೊಂಡಿದ್ದನು. ಮಿಾಡಿಯಳಿಗೂ ಘೋರ ವಾದ ಮರಣಶಿಕ್ಷೆಯನ್ನು ವಿಧಿಸಬೇಕೆಂದು ಅವನು ಮನಸ್ಸುಮಾಡಿದ್ದನು! ಈ ಆಲೋಚನೆಗಳೆಲ್ಲವೂ ಗೋಪ್ಯವಾಗಿ ನಡೆದಿದ್ದರೂ, ಮಾಟಗಾತಿಯಾದ ಮಿಾಡಿಯ ಳಿಗೆ ಅವನ್ನು ತಿಳಿದುಕೊಳ್ಳಲು ಅಸಾಧ್ಯವಾಗಲಿಲ್ಲ. ಆದರೂ ಅವಳು ಏನೂ ತಿಳಿಯ ದವಳಂತೆ ಇದ್ದುಕೊಂಡಿದ್ದಳು. ಔತಣವು ಮುಗಿದ ಬಳಿಕ ಜೇಸನ್ ಮೊದಲಾದವ ರನ್ನು ಕುರಿತು—'' ಮಿತ್ರರುಗಳಿರಾ! ನೀವುಗಳು ನನ್ನ ಅಳಿಯನಾದ ಫ್ರಿಕ್ಸಸ್ಸಿನ ರಾಜ್ಯದಿಂದಲೇ ಬಂದಿರುವಿರಾದಕಾರಣ, ಕನಕೋರ್ಣವು ಈಗ ನಿಮ್ಮ ವಶವೇ ಆಗುವುದರಿಂದ ನನಗೆ ಪರಮಾನಂದವಾಗಿರುವುದು. ಅದನ್ನು ಇತರ ದೇಶದವರು ಸ್ವಾಧೀನಪಡಿಸಿಕೊಂಡಿದ್ದರೆ, ನಮ್ಮೆಲ್ಲರಿಗೂ ಬಹಳ ವ್ಯಸನವಾಗುತ್ತಿದ್ದಿತು. ಕನ ಕೋರ್ಣವನ್ನು ಕಾದುಕೊಂಡಿರುವ ರೆಕ್ಕೆಯ ಸರ್ಪವೊಂದನ್ನು ಜಯಿಸಿಬಿಟ್ಟರೆ ನಿಮ್ಮ ಉದ್ದೇಶವು ಸಾರ್ಥಕವಾದಂತೆಯೇ. ಆದರೆ ಅದಕ್ಕೆ ಬಹುಕಾಲದಿಂದಲೂ ಆಹಾರವಿಲ್ಲದಿರುವುದರಿಂದ, ಈಗ ಅದಕ್ಕೆ ಆಹಾರೇಚ್ಛೆಯು ಪ್ರಬಲವಾಗಿರುವುದು. ಅದು ಹಿಂದೆ ಒಬ್ಬೊಬ್ಬ ಆಳನ್ನು ಒಂದೊಂದು ಗುಟುಕಿಗೆ ನುಂಗುತ್ತಿದ್ದಿತು. ಈಗ ಅದು ಮೂವರು ನಾಲ್ವರನ್ನಾದರೂ ಒಂದೇ ಸಲಕ್ಕೆ ನುಂಗಿಬಿಡುವುದು ಖಂಡಿ ತವು. ನೀವುಗಳು ಕನಕೋರ್ಣವನ್ನು ಸಂಪಾದಿಸಬೇಕೆಂದೇ ಎಷ್ಟೋ ಅಪಾಯ ಗಳನ್ನು ಲಕ್ಷಿಸದೆ ಇಷ್ಟು ದೂರ ಬಂದಿರುವುದರಿಂದ ನಿಮಗೆ ಉತ್ಸಾಹಭಂಗ

ವನ್ನುಂಟುಮಾಡಲು ನನಗೆ ಮನಸ್ಸಿಲ್ಲ. ನಾಳೆಯದಿನ ಪ್ರಾತಃಕಾಲ ಕನಕೋರ್ಣ ವಿರುವ ವನದ ಬಳಿಗೆ ನೀವು ಬಂದು ಸಿದ್ಧವಾಗಿರಿ. ನಿಮ್ಮಲ್ಲಿ ಆಯುಸ್ಸು ಗಟ್ಟಿ ಯಾಗಿರುವವರು ಯಾರಾದರೂ ಆ ಸರ್ಪವನ್ನು ಜಯಿಸಿದ ಪಕ್ಷದಲ್ಲಿ ಕನಕೋರ್ಣ ವನ್ನು ಸಂತೋಷದಿಂದ ಅವರ ವಶಪಡಿಸುವೆನು" ಎಂದು ಹೇಳಿ ಅತಿವಿನಯ ದಿಂದ ಅವರನ್ನು ದೊರೆಯು ಕಳುಹಿಸಿಕೊಟ್ಟನು.

೧೩. ನಾವಿಕರು ಮಾರನೆಯದಿನ ಕನಕೋರ್ಣವು ತಮ್ಮ ವಶವಾಗು ವುದೆಂದು ವಿನೋದವಾಗಿ ಮಾತನಾಡಿಕೊಳ್ಳುತ್ತ ಆ ದಿನ ರಾತ್ರಿ ಬಹಳ ಕಾಲ ದವರೆಗೂ ಎಚ್ಚರವಾಗಿಯೇ ಇದ್ದರು. ಸುಮಾರು ನಡುರಾತ್ರಿಯಲ್ಲಿ ಮೀಡಿ ಯಳು ಹಡಗಿನ ಬಳಿಗೆ ಬಂದು "ಜೇಸನ್! ಜೇಸನ್! ಎಂದು ಎರಡುಸಾರಿ ಕೂಗಿದಳು. ಈ ಧ್ವನಿಯನ್ನು ಕೇಳಿ ಜೇಸನ್ನನು ಹಡಗಿನಿಂದ ಹೊರಕ್ಕೆ ಬರಲು, ಅವನನ್ನು ಕರೆದು—"ನೀವುಗಳು ಪ್ರಯಾಣಕ್ಕೆ ಕೂಡಲೆ ಸಿದ್ಧವಾಗಬೇಕು; ತಡಮಾಡಿದರೆ ಘೋರವಾದ ಅಪಾಯವು ಸಂಭವಿಸೀತು!" ಎಂದು ಹೇಳಿ ದಳು. ಈ ಮಾತುಗಳನ್ನು ಕೇಳಿ ಜೇಸನ್ನಿಗೆ ದಿಗ್ಭ್ರಮೆಯಾಯಿತು. ಆದುದ ರಿಂದ "ರಾಜಪುತ್ರಿ! ಇದೇನು! ಹೀಗೆ ಹೇಳುವೆ! ಎಣ್ಣೆ ಬರುವಹೊತ್ತಿಗೆ ಕಣ್ಣು ಮುಚ್ಚಿಕೊಳ್ಳುವ ದಡ್ಡಗಾಣಿಗನಂತೆ ನಾವೂ ಆಚರಿಸುವೆವೆಂದು ತಿಳಿದಿರು ವೆಯಾ? ಎರಡು ಪ್ರಬಲವಾದ ಗಂಡಗಳನ್ನು ಜಯಿಸಲು ಸಾಹಾಯ್ಯಮಾಡಿ, ಕಡೆಗೆ ನಮ್ಮ ಮನೋರಥಕ್ಕೆ ಭಂಗ ತರುವಂತೆ ಮಾತನಾಡುವೆಯಲ್ಲಾ!" ಎಂದು ಹೇಳಿದನು. ಆಗ ಆಕೆಯು "ನನ್ನ ಗತಿಯು ಏನಾದರೂ ಆಗಲಿ, ನಿಮ್ಮ ಕಾರ್ಯವನ್ನೇನೋ ಸಾಧಿಸಲು ಯತ್ನಿಸುವೆನು. ಹಡಗಿನಲ್ಲಿರುವ ಆರ್ಫಿಯಸ್ಸನು ತನ್ನ ವೀಣೆಯನ್ನು ತೆಗೆದುಕೊಂಡು ಕೂಡಲೆ ನಮ್ಮೊಡನೆ ಬರುವಂತೆ ತಿಳಿಸು. ನೀನೂ ಕೂಡಲೆ ಹೊರಡು" ಎಂದು ತ್ವರೆಪಡಿಸಿದಳು. ಮೀಡಿಯಳ ದುಃಖಸೂಚಕ ವಾದ ಈ ಮಾತುಗಳನ್ನು ಕೇಳಿ "ಇದೇಕೆ ಹೀಗೆ ಹೇಳುವೆ? ನಿನಗೆ ಒದಗ ಬಹುದಾದ ಕಷ್ಟವು ಯಾವುದಾದರೂ ಇರುವುದೆ? ಎಂದು ಜೇಸನ್ನನು ಕೇಳಿ ದನು. ಅದಕ್ಕೆ ಆಕೆಯು "ನಮ್ಮ ತಂದೆಯು ಬಹಳ ಕ್ರೂರಿ; ಅವನು ನಿಮ್ಮ ನ್ನೆಲ್ಲಾ ನಾಳೆ ಕೊಲ್ಲಿಸಿ, ನನಗೂ ಕ್ರೂರವಾದ ಮರಣದಂಡನೆಯನ್ನು ವಿಧಿಸಬೇ ಕೆಂದಿರುವನು. ಆದುದರಿಂದ ನೀವು ಈ ರಾಜ್ಯದಿಂದ ಹೊರಟುಹೋದಬಳಿಕ ನಾನು ಘೋರವಾದ ಆ ಶಿಕ್ಷೆಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ, ವಿಷವನ್ನು ಕುಡಿ ಯಬೇಕಾಗುವುದು; ಇಲ್ಲವೋ ದೇಶಾಂತರಕ್ಕಾದರೂ ಹೋಗಬೇಕಾಗುವುದು.

ಹೇಗೇ ಆದರೂ ನನ್ನನ್ನು ನೀನು ಮರೆಯುವುದಿಲ್ಲವಷ್ಟೆ ?" ಎಂದು ಹೇಳಿದಳು. "ಪರದೇಶಕ್ಕೆ ಹೋಗುವುದಕ್ಕಿಂತ ನೀನೂ ನಮ್ಮೊಡನೆಯೇ ನಮ್ಮ ದೇಶಕ್ಕೆ ಬಂದುಬಿಡಬಹುದಲ್ಲಾ ! ಎಂದು ಜೇಸನ್ನನು ಹೇಳಲು, ಅದಕ್ಕೆ ಮಿಾಡಿಯಳೂ ಸಮ್ಮತಿಸಿದಳು.

೯೪. ಬಳಿಕ ಮಿಾಡಿಯಳು ಒಂದು ಭರಣಿಯನ್ನು ತನ್ನ ಮಡಿಲಿನಿಂದ ತೆಗೆದು ಜೇಸನ್ನಿಗೆ ಕೊಟ್ಟು "ಇದರಲ್ಲಿರುವ ಭಸ್ಮವನ್ನು ರೆಕ್ಕೆಯಸರ್ಪದ ಮೇಲೆ ಹಾಕಿದರೆ ಅದಕ್ಕೆ ನಿದ್ದೆ ಬಂದುಬಿಡುವುದು. ಆರ್ಫಿಯಸ್ಸನು ವೀಣೆಯನ್ನು ನುಡಿಸುವುದರಿಂದ ಅದಕ್ಕೆ ನಿದ್ದೆಯು ಮತ್ತಷ್ಟು ಚೆನ್ನಾಗಿ ಹಿಡಿಯುವುದು. ರೆಕ್ಕೆಯ ಸರ್ಪವು ಕ್ರೂರವಾದುದಾದರೂ, ಅದನ್ನು ಕೊಲ್ಲುವ ಶಕ್ತಿಯು ನನಗೆ ಇದ್ದರೂ, ಅಂತಹ ಘೋರಪ್ರಾಣಿಗಳಿಂದಲೂ ಅನೇಕ ಕೆಲಸಗಳನ್ನು ನಮ್ಮಂತಹವರು ಸಾಧಿಸಲಾಗುವುದರಿಂದ ಅದನ್ನು ಉಳಿಸುವೆನು. ನಾನೂ ನಿನ್ನೊಡನೆಯೇ ಉದ್ಯಾನಕ್ಕೆ ಬರುವೆನು. ಆರ್ಫಿಯಸ್ಸನು ಮಾತ್ರ ಬಾಗಿಲಲ್ಲಿಯೇ ವೀಣೆಯನ್ನು ನುಡಿಸುತ್ತಿರಲಿ ; ನೀನು ನಿನ್ನ ಸಂಗಡಿಗರೆಲ್ಲರನ್ನೂ ಪ್ರಯಾಣಕ್ಕೆ ಸಿದ್ಧರಾಗಿರುವಂತೆ ಎಚ್ಚರಿಸಿ ಆರ್ಫಿಯಸ್ಸನ್ನು ಕರೆದುಕೊಂಡು ಬಂದುಬಿಡು" ಎಂದು ತಿಳಿಸಿದಳು. ಸ್ವಲ್ಪ ಹೊತ್ತಿನಲ್ಲಿಯೇ ಜೇಸನ್ನನು ಆರ್ಫಿಯಸ್ಸಿನೊಡನೆ ಹಿಂದಿರುಗಿದನು ; ಅವರು ಮೂವರೂ ತತ್‌ಕ್ಷಣವೇ ಕನಕೋರ್ಣವಿದ್ದ ಉದ್ಯಾನಕ್ಕೆ ಹೊರಟರು.

೯೫. ಉದ್ಯಾನವನವು ಸಮಿಾಪಿಸುತ್ತಲೇ ಮಿಾಡಿಯಳು ವೀಣೆಯನ್ನು ನುಡಿಸುವಂತೆ ಆರ್ಫಿಯಸ್ಸಿಗೆ ಹೇಳಿ ಅವನನ್ನು ಉದ್ಯಾನದ ಬಾಗಿಲಲ್ಲಿ ನಿಲ್ಲಿಸಿದಳು. ಬಳಿಕ ಅವಳು ಏನೋ ಮಂತ್ರಗಳನ್ನು ಪಿಸುಗುಟ್ಟಿಕೊಳ್ಳುತ್ತಾ ಜೇಸನ್ನನ್ನೂ ಕರೆದುಕೊಂಡು ಉದ್ಯಾನವನವನ್ನು ಪ್ರವೇಶಿಸಿದಳು. ದೂರದಲ್ಲಿ ಒಂದು ಮರದ ಮೇಲೆ ಕನಕೋರ್ಣದ ಹೊಂಬಣ್ಣವು ಥಳಥಳಿಸುತ್ತಿದ್ದಿತು ; ಆ ಮರದ ಬುಡದಲ್ಲಿ ಒಂದು ವಿಜಾತೀಯವಾದ ಸರ್ಪವು ತನ್ನ ಮೈಯ ಸುರುಳಿಗಳನ್ನು ಬಗೆಬಗೆಯಾಗಿ ಅಲ್ಲಾಡಿಸುತ್ತಾ ಗಟ್ಟಿಯಾಗಿ ಉಸಿರುಬಿಡುತ್ತಾ ಇದ್ದಿತು. ಅದಕ್ಕೆ ರೆಕ್ಕೆಗಳೂ ಬಲವಾದ ಉಗುರುಗಳಿದ್ದ ಕಾಲುಗಳೂ ಇದ್ದುವು. ಅದರ ಮೈಮೇಲೆಲ್ಲಾ ಮೊಸಳೆಗಿರುವಂತೆ ತೆಳುವಾದ ಮೂಳೆಯಚೆಕ್ಕೆಗಳಿದ್ದುವು. ಅದರ ಕವಲುನಾಲಗೆಯು ಕ್ಷಣಕ್ಷಣಕ್ಕೂ ಹಿಂದಕ್ಕೂ ಮುಂದಕ್ಕೂ ಅತ್ತಕಡೆಗೂ ಇತ್ತಕಡೆಗೂ ಚಲಿಸುತ್ತಿದ್ದಿತು ; ಅದರ ಕಣ್ಣುಗಳು ದೊಡ್ಡ ಮಾಣಿಕ್ಯಗಳಂತೆ ಕೆಂಪಗೆ ಬೆಳಗುತ್ತಿದ್ದುವು. ಆ ಸರ್ಪವನ್ನು ನೋಡಿದ್ದರೆ ಸಾಮಾನ್ಯರು ಅಲ್ಲಿಂದಲೇ

ಹಿಂದಕ್ಕೆ ಓಡಿಹೋಗುತ್ತಿದ್ದರೆಂದು ನಿಸ್ಸಂಶಯವಾಗಿ ಹೇಳಬಹುದು. ಅದು ತನ್ನ ಅವಲಕ್ಷಣವಾದ ಮೋರೆಯನ್ನು ದಿಕ್ಕುದಿಕ್ಕಿಗೂ ಚಾಚುತ್ತಾ ತನ್ನ ಬಳಿಗೆ ಯಾರು ಬರುತ್ತಿರುವರೋ ನೋಡಬೇಕೆಂದು ಪ್ರಯತ್ನಿಸುತ್ತಿದ್ದಿತು. ಒಂದು ಸಲ ಅದು ಜೇಸನ್ನಿನ ಕಡೆಗೂ ಮೂತಿಯನ್ನು ಚಾಚಿ ತಟ್ಟನೆ ಹಿಂದಕ್ಕೆ ಎಳೆದು ಕೊಂಡು ಹೊಸಬನಾದ ಅವನನ್ನು ನುಂಗಿಬಿಡಬೇಕೆಂದು ತನ್ನ ಬಾಯನ್ನು ಅಗಲ ವಾಗಿ ತೆರೆದು ಅವನ ಬಳಿಗೆ ಮತ್ತೊಮ್ಮೆ ರಭಸದಿಂದ ಚಾಚಿತು. ಇದಕ್ಕೆ ಜೇಸ ನ್ನನು ಸಿದ್ಧವಾಗಿಯೇ ಇದ್ದನು. ತನ್ನ ಬಳಿಗೆ ಮೂತಿಯು ಬಂದ ಸಮಯವನ್ನು ನೋಡಿಕೊಂಡಿದ್ದು, ಮೀಡಿಯಳು ತನಗೆ ಕೊಟ್ಟಿದ್ದ ಭಸ್ಮವನ್ನು ಅದರ ಬಾಯಿಗೆ ಹಾಕಿಬಿಟ್ಟನು. ಆ ಭಸ್ಮವು ಪ್ರೊಮಿಥಿಯಸ್ಸಿನ ಯಕೃತ್ತಿನ ಮೊತ್ತಮೊದಲನೆಯ ರಕ್ತಬಿಂದುವು ಯಾವಸ್ಥಳದಲ್ಲಿ ಬಿದ್ದಿದ್ದಿತೋ ಅದೇ ಸ್ಥಳದಲ್ಲಿ ಬೆಳೆದ ಒಂದು ಮೂಲಿಕೆಯದು. ಮೀಡಿಯಳು ಆ ಮೂಲಿಕೆಯನ್ನು ಉಚಿತಸಮಯದಲ್ಲಿ ಮಂತ್ರ ಪೂರ್ವಕವಾಗಿ ಕಿತ್ತುತಂದು ಅದಕ್ಕೆ ಅಸಹ್ಯಕರವಾದ ಕೆಲವು ಪದಾರ್ಥಗಳನ್ನು ಸೇರಿಸಿ ಆ ಭಸ್ಮವನ್ನು ಸಿದ್ಧಪಡಿಸಿದ್ದಳು. ಭಸ್ಮವು ಬಾಯಿಗೆ ಬಿದ್ದಕೂಡಲೆ ಸರ್ಪವು ತನ್ನ ತಲೆಯನ್ನು ತಟ್ಟನೆ ಹಿಂದಕ್ಕೆ ಎಳೆದುಕೊಂಡುಬಿಟ್ಟಿತು; ಅದರ ನಾಲಗೆಯ ಚಲನವು ನಿಂತಿತು; ಅದರ ಕಣ್ಣುಗಳ ಕಾಂತಿಯು ಮಂದವಾಗುತ್ತ ಬಂದು, ಸ್ವಲ್ಪ ಹೊತ್ತಿನಲ್ಲಿಯೇ ಅದೃಶ್ಯವಾಯಿತು; ಅದರ ಸುರುಳಿಗಳ ಚಲನೆ ಯೆಲ್ಲವೂ ನಿಂತುಹೋಯಿತು. ಈ ಸಮಯದಲ್ಲಿ ಮೀಡಿಯಳು ಜೇಸನ್ನನ್ನು ಕುರಿತು—" ಜೇಸನ್! ಅಗೋ! ಅಲ್ಲಿರುವ ಕನಕರೋಮವನ್ನು ತೆಗೆದುಕೊ; ಈಗಲೇ ಹೊರಡುವ? ತಡಮಾಡಿದರೆ ಇನ್ನು ಸ್ವಲ್ಪಹೊತ್ತಿನೊಳಗಾಗಿ ಸರ್ಪಕ್ಕೆ ಎಚ್ಚರವಾಗುವುದು. ಬಳಿಕ ನಮ್ಮ ಸಾಹಸದಿಂದ ಪ್ರಯೋಜನವಾಗದು" ಎಂದು ಹೇಳಿದಳು. ಜೇಸನ್ನನು ಅದೇ ಮೇರೆಗೆ ಮುಂದೆ ನುಗ್ಗಿ ಒಂದೆರಡು ಕ್ಷಣಗಳಲ್ಲಿ ಕನಕರೋಮವನ್ನು ತೆಗೆದುಕೊಂಡು ಅದನ್ನು ತನ್ನ ಹೆಗಲಮೇಲೆ ಹಾಕಿಕೊಂಡನು. ಆಗ ಅವನ ಮನಸ್ಸಿನಲ್ಲಿ ಉಂಟಾದ ಸಂತೋಷರಸವು ಹೊರಕ್ಕೂ ಏನಾದರೂ ಹರಿದು ಬರುತ್ತಿದ್ದಿತೋ ಎಂಬಂತೆ ಅವನ ಸುತ್ತಲೂ ಹೊಂಬಣ್ಣದ ಕಾಂತಿಯು ಪ್ರಸರಿಸುತ್ತಿದ್ದಿತು.

೯೬. ಜೇಸನ್ನನೂ ಮೀಡಿಯಳೂ ಹಿಂದಿರುಗುವುದನ್ನೇ ಆರ್ಫಿಯಸ್ಸನು ನಿರೀಕ್ಷಿಸುತ್ತಿದ್ದನು. ಅವರು ಸಮೀಪಿಸುತ್ತಲೇ ಮೂವರೂ ಬೇಗಬೇಗನೆ ಹಡಗಿ ನ ಬಳಿಗೆ ಬಂದರು. ನಾವಿಕರೆಲ್ಲರೂ ಪ್ರಯಾಣಕ್ಕೆ ಸನ್ನದ್ಧರಾಗಿ ತಮ್ಮ ತಮ್ಮ

ಸ್ಥಾನದಲ್ಲಿ ಕುಳಿತು ಹುಟ್ಟುಗಳನ್ನು ಆಡಿಸುವುದಕ್ಕೆ ಸಿದ್ಧರಾಗಿದ್ದರು. ಜೇಸನ್ ಮುಂತಾದವರು ದೋಣಿಯಲ್ಲಿ ಕಾಲಿಟ್ಟಕೂಡಲೆ ಹುಟ್ಟುಗಳು ಏಕಕಾಲದಲ್ಲಿ ನೀರಿನಲ್ಲಿ ಚಲಿಸಲಾರಂಭಿಸಿದುವು; ಅನುಕೂಲವಾರುತವು ಬೀಸುತ್ತಿದ್ದುದರಿಂದ ದೋಣಿಯು ಬೇಗಬೇಗನೆ ಪಶ್ಚಿಮಾಭಿಮುಖವಾಗಿ ಚಲಿಸಿತು; ತೀರಗಳಲ್ಲಿದ್ದ ಗಿಡಮರಗಳು ಬೇಗಬೇಗನೆ ಪೂರ್ವದಿಕ್ಕಿಗೆ ಓಡುತ್ತಿದ್ದಂತೆ ನಕ್ಷತ್ರಗಳ ಬೆಳಕಿನಲ್ಲಿ ತೋರುತ್ತಿದ್ದುವು. ನಾವಿಕರು ಕನಕೋರ್ಣದ ಖ್ಯಾತಿಯನ್ನು ವರ್ಣಿಸುವ ಗಾನಗಳನ್ನು ಹಾಡಿಕೊಳ್ಳುತ್ತ ಮುಂದಮುಂದಕ್ಕೆ ಹೊರಟರು.

# ಹದಿನಾರನೆಯ ಪ್ರಕರಣ.

## ಆರ್ಗೋನಾವಿಕರು ಗ್ರೀಸಿಗೆ ಹಿಂದಿರುಗಿದುದು.

೯೭. ಆರ್ಗೋ ನಾವಿಕರು ಕೆಲವು ನಿಮಿಷಗಳು ಪ್ರಯಾಣಮಾಡಿಕೊಂಡುಹೋಗುವುದರೊಳಗಾಗಿ ಅವರಿಗೆ ಘೋರವಾದ ಮೊರೆತವೊಂದು ಕೇಳಿಸಿತು. ಕೂಡಲೆ ಸಮುದ್ರತೀರದಲ್ಲಿ ದೀಪದ ಪಂಜುಗಳು ಅತ್ತಿತ್ತ ವೇಗವಾಗಿ ಚಲಿಸಲಾರಂಭವಾದುವು; ಮನುಷ್ಯರ ಕೂಗಿನ ಗದ್ದಲವೂ ಅಸ್ಪಷ್ಟವಾಗಿ ಕೇಳಬರುತ್ತಿದ್ದಿತು. ಮೇಲೆ ಹೇಳಿದ ಮೊರೆತವು ರೆಕ್ಕೆಯುಸರ್ಪದಿಂದ ಆದುದು. ಜೇಸನ್ ಮೊದಲಾದವರು ಉದ್ಯಾನವನವನ್ನು ಬಿಟ್ಟ ಕೆಲವು ನಿಮಿಷಗಳೊಳಗಾಗಿ ಸರ್ಪಕ್ಕೆ ಎಚ್ಚರವಾಯಿತು. ಕನಕೋರ್ಣವಿದ್ದ ಕಡೆಗೆ ತಿರುಗಿನೋಡಿದಾಗ ಅದು ಕಾಣದಿರಲು, ಸರ್ಪವು ರಭಸದಿಂದ ತನ್ನ ಬಾಲವನ್ನು ನೆಲಕ್ಕೆ ಅಪ್ಪಳಿಸುತ್ತ, ಗಟ್ಟಿಯಾಗಿ ಉಸಿರುಬಿಡುತ್ತಿದ್ದಿತು. ಈ ಗದ್ದಲದಿಂದ ಎಯಿಯಾದ್ವೀಪದ ನಿವಾಸಿಗಳೆಲ್ಲರಿಗೂ ಎಚ್ಚರವಾಯಿತು: ಹೆಂಗಸರು ಮಕ್ಕಳು ಭಯದಿಂದ ಕಿರಿಚಿಕೊಂಡರು. ಕೂಡಲೆ ಆರ್ಗೋನಾವಿಕರನ್ನು ಬೆನ್ನಟ್ಟುವ ಪ್ರಯತ್ನಗಳು ನಡೆದುವು. ಅನೇಕ ದೋಣಿಗಳು ಆರ್ಗೋನಾವೆಯನ್ನು ಹಿಂಬಾಲಿಸಿದುವು.

೯೮. ಇದನ್ನು ಮಿಡಿಯಳು ಕಂಡು ಜೇಸನ್ನನ್ನು ಕುರಿತು ಈ ಮೇರೆಗೆ ಸಂಭಾಷಿಸಿದಳು:—"ಜೇಸನ್! ಈಗ ಒದಗಿರುವ ಗಂಡವು ಅತ್ಯಂತ ಕಠಿನವಾದುದು. ನಮ್ಮಲ್ಲಿ ಯಾರೇ ಆಗಲಿ ನನ್ನ ತಂದೆಯ ಕೈಗೆ ಸಿಕ್ಕಿಬಿದ್ದರೆ ನರಕದ ಯಾತನೆಗಳೆಲ್ಲವನ್ನೂ ಈ ಲೋಕದಲ್ಲಿಯೇ ನಮಗೆ ಉಂಟುಮಾಡಿ ಅತ್ಯಂತ

ಕ್ರೂರವಾದ ಶಿಕ್ಷೆಯನ್ನು ವಿಧಿಸುವನು. ಮಗಳ ವೈಧವ್ಯಕ್ಕೂ ಲಕ್ಷಿಸದೆ ಫ್ರಿಕ್ಸ ಸ್ಸನ್ನು ವಧಿಸಿ, ನಿರಪರಾಧಿಗಳಾದ ಅವನ ಮಕ್ಕಳುಗಳನ್ನೂ ಕೊಲ್ಲಿಸಲು ಯತ್ನಿಸಿದ್ದುದು ನಿನಗೆ ತಿಳಿದೇ ಇರುವುದು. ಅವನ ಬಳಿಯಲ್ಲಿ ಸಾಹಸಿಗಳಾದ ಅನೇಕರು ಯೋಧರು ಇರುವುದರಿಂದ ನೀವು ಸಲಪತ್ತೆಂಟುಮಂದಿಗಳೂ ಶೌರ್ಯದಿಂದಲೇ ನಮ್ಮ ತಂದೆಯನ್ನು ಗೆದ್ದುಬಿಡಬಹುದೆಂಬ ಭ್ರಮೆಯನ್ನು ಇಟ್ಟುಕೊಳ್ಳ ಬೇಡಿ. ಅಗೋ ಮುಂದೆ ಬರುತ್ತಿರುವವನೇ ನನ್ನ ತಮ್ಮನಾದ ಅಬ್ಸರ್ಟಸ್ಸನು. ನಮ್ಮ ಈ ವಿಪತ್ತಿನಲ್ಲಿ ದೇವತೆಗಳಿಗೆ ಸಮ್ಮತವಲ್ಲದ ಕ್ರೂರಕೃತ್ಯವೊಂದನ್ನು ಮಾಡಿಬಿಡುವೆನು........'' ಎಂದು ಹೇಳುವಷ್ಟರಲ್ಲಿ ಜೇಸನ್ನನು ಅವಳನ್ನು ತಡೆಯು ಬೇಕೆಂದು ಯತ್ನಿಸುತ್ತಿದ್ದನು. ಆದರೆ ಶತ್ರುಗಳು ಬಹಳ ಸಮೀಪಕ್ಕೆ ಬಂದಿದ್ದರು. ಅವರನ್ನು ನಿಗ್ರಹಿಸಲು ಏರ್ಪಾಡುಮಾಡುವುದರೊಳಗಾಗಿ ಆರ್ಗೋದೋಣಿಗೆ ಬಹಳ ಹತ್ತಿರಕ್ಕೆ ಬಂದಿದ್ದ ಅಬ್ಸರ್ಟಸ್ಸನ್ನು ಅವನ ಸಹೋದರಿಯು ರೌದ್ರಾವೇಶದಿಂದ ಛಿದ್ರಛಿದ್ರವಾಗಿ ಕತ್ತರಿಸಿಬಿಟ್ಟಿದ್ದಳಲ್ಲದೆ ಅವನ ಮೈಯ ತುಂಡುಗಳನ್ನು ಸಮುದ್ರದಮೇಲೆ ದಿಕ್ಕುದಿಕ್ಕಿಗೆ ಎಸೆದುಬಿಟ್ಟಳು. ಮತ್ತೆ ಕೆಲವು ನಿಮಿಷಗಳಲ್ಲಿಯೇ ಅಲ್ಲಿಗೆ ಬಂದ ಎಯಿಟೀಸನು ಆ ಕಾಲದ ಪದ್ಧತಿಯಂತೆ ಮೃತನ ಅಂತ್ಯಸಂಸ್ಕಾರವಾಗುವವರೆಗೂ ಪ್ರತೀಕಾರಕಾರ್ಯವನ್ನು ತಡೆಯುಬೇಕೆಂದು ತನ್ನ ಕಡೆಯವರಿಗೆ ಆಜ್ಞಾಪಿಸಿದನು. ಬಳಿಕ ಅವರು ಮೃತನ ದೇಹಭಾಗಗಳನ್ನು ಒಟ್ಟುಗೂಡಿಸುವ ಪ್ರಯಾಸಕಾರ್ಯದಲ್ಲಿ ಪ್ರವೃತ್ತರಾದರು. ಉತ್ತರಕ್ರಿಯೆಗಳು ಮುಗಿಯುವಷ್ಟರಲ್ಲಿ ಎಯಿಟೀಸಿನ ರಾಜ್ಯವನ್ನು ಶತ್ರುಗಳು ಆಕ್ರಮಿಸಿಕೊಂಡು ಅವನನ್ನು ಕೊಂದು ಬಿಟ್ಟರು.

೯೯. ಇತ್ತ ಜೇಸನ್ನನು ಮಿಾಡಿಯಳ ಕ್ರೌರ್ಯವನ್ನು ಕಂಡು ಅಸಹ್ಯಪಟ್ಟುಕೊಂಡಿದ್ದನು. ಆದರೆ ಅವಳು ಕನಕೋರ್ಣಾರ್ಜನಕಾರ್ಯದಲ್ಲಿ ತನಗೆ ಸಾಹಾಯ್ಯಮಾಡಿದ್ದುದನ್ನೂ ಅವಳನ್ನು ಗ್ರೀಸಿಗೆ ಕರೆದುಕೊಂಡುಹೋಗುವುದಾಗಿ ವಾಗ್ದಾನಮಾಡಿದ್ದುದನ್ನೂ ಜ್ಞಾಪಿಸಿಕೊಂಡು ಅವಳನ್ನು ನಿಷ್ಠುರವಾಗಿ ದಂಡಿಸದೆ ಸುಮ್ಮನಿದ್ದನು. ಮಾಯಗಾತಿಯಾದ ಆ ಸ್ತ್ರೀಯು ಆರ್ಗೋನಾವಿಕರಿಗೆ ವಿನೋದಕರವಾದ ಅನೇಕ ಕಥೆಗಳನ್ನು ಹೇಳುತ್ತ ಆಗಾಗ ಸಂಭವಿಸಿದ ವಿಪತ್ತುಗಳಲ್ಲಿ ಅವಕ್ಕೆ ಪರಿಹಾರವನ್ನು ಸೂಚಿಸುತ್ತ ಆರ್ಗೋನಾವಿಕರೆಲ್ಲರನ್ನೂ ಮೆಚ್ಚಿಸಿಬಿಟ್ಟಳು. ಆದರೆ ಧರ್ಮಪರರಾದ ದೇವತೆಗಳನ್ನು ಮಾತ್ರ ಅವಳು ಮೆಚ್ಚಿಸಲಾರದೆ ಹೋದಳು. ಅವಳ ಪಾಪದ ಫಲವನ್ನು ಅವಳ ಜೊತೆಯಲ್ಲಿದ್ದ ಆರ್ಗೋನಾವಿಕರೂ ಸ್ವಲ್ಪಕಾಲದವರೆಗೆ ಅನುಭವಿಸಬೇಕಾಯಿತು.

೧೦೦. ಆರ್ಗೋನಾವೆಯು ಸ್ವಲ್ಪದೂರ ಹೋಗುವುದರೊಳಗಾಗಿ ಪ್ರತಿಕೂಲಮಾರುತಗಳು ಬೀಸಲಾರಂಭಿಸಿದುವು. ನಾವಿಕರು ಎಷ್ಟೆಷ್ಟೋ ಪ್ರಯತ್ನಿಸಿದರೂ ಆರ್ಗೋನಾವೆಯು ಮುಂದಕ್ಕೆ ಹೋಗದೆ ಯಾವುದೋ ಒಂದು ನದೀಮುಖಕ್ಕೆ ಬಂದುಸೇರಿತು. ಆ ನದಿಯ ಮೇಲ್ಗಡೆಗೆ ಸ್ವಲ್ಪಕಾಲ ಪ್ರಯಾಣ ಮಾಡಿದ ಬಳಿಕ ದೋಣಿಯು ಮುಂದಕ್ಕೆ ಹೋಗಲಾರದಷ್ಟು ಮಟ್ಟಿಗೆ ಪ್ರವಾಹವು ಕಿರಿದಾಗುತ್ತ ಬಂದುದರಿಂದ ನಾವಿಕರು ದೋಣಿಯನ್ನು ಹೊತ್ತುಕೊಂಡೇ ಕೆಲವು ದಿನಗಳವರೆಗೂ ಪ್ರಯಾಣಮಾಡಿಕೊಂಡು ಹೋದರು. ಇಷ್ಟರಲ್ಲಿ ಹೆರ್‍ಯಾಕ್ಲಸ್ಸನೂ ಬಂದು ನಾವಿಕರನ್ನು ಸೇರಿಕೊಂಡನು. ಅವರು ಬಳಿಕ ಇನ್ನೊಂದು ನದಿಯಮೇಲೆ ಪ್ರಯಾಣಮಾಡಿ ಒಂದು ಸಮುದ್ರಕ್ಕೆ ಹೋಗಿ ಯಾವಾಗಲೂ ಕಾಣದಿದ್ದ ಆ ಸಮುದ್ರದ ಅಂಚಿನಲ್ಲಿಯೇ ಅನೇಕ ತಿಂಗಳುಗಳವರೆಗೆ ಪ್ರಯಾಣ ಮಾಡಿ ಕಡೆಗೆ ಒಂದಾನೊಂದು ದ್ವೀಪಕ್ಕೆ ಬಂದರು.

೧೦೧. ಆ ದ್ವೀಪವು ಸಾಗರಮೋಹಿನಿಯರಿಗೆ ವಾಸಸ್ಥಾನವಾಗಿದ್ದಿತು. ಅವರು ಮುಖದ ವಿಷಯದಲ್ಲಿ ಮಾತ್ರ ಮನುಷ್ಯಾಕೃತಿಯಾಗಿದ್ದರೇ ಹೊರತು, ಅವರ ಮಿಕ್ಕದೇಹಭಾಗಗಳೆಲ್ಲಾ ಪಕ್ಷಿಗಳ ಆಕಾರವಾಗಿದ್ದುವು. ಅವರು ಆ ದ್ವೀಪದ ಬಳಿಗೆ ಬಂದ ನಾವಿಕರಿಗೆ ತಮ್ಮ ಅಮಾನುಷವಾದ ಗಾನದಿಂದ ಮೋಹವನ್ನುಂಟುಮಾಡಿ ಅವರ ಹಸಿವು ಬಾಯಾರಿಕೆಗಳನ್ನು ಹೋಗಲಾಡಿಸಿ ಸ್ತಂಭೀಭೂತರನ್ನಾಗಿಮಾಡಿ ಅವರನ್ನು ಕೊಂದುಬಿಡುತ್ತಿದ್ದರು. ಹೀಗೆ ಸತ್ತು ಹೋದವರ ಅಸ್ಥಿಪಂಜರಗಳು ಬಿಳಿಚಿಕೊಂಡು ಸಮುದ್ರತೀರದಲ್ಲೆಲ್ಲಾ ಬಿದ್ದಿದ್ದುವು. ಆರ್ಫಿಯಸ್ಸನು ಆ ಸಮಯದಲ್ಲಿ ಆ ದೋಣಿಯಲ್ಲಿರದಿದ್ದರೆ ಆರ್ಗೋನಾವಿಕರ ಗತಿಯೂ ಹಾಗೆಯೇ ಆಗಿಹೋಗುತ್ತಿದ್ದಿತು. ಆದರೆ ಆರ್ಫಿಯಸ್ಸನು ತನ್ನ ಕೌಶಲವನ್ನೆಲ್ಲಾ ವೆಚ್ಚಮಾಡಿ ಸಾಗರಮೋಹಿನಿಗಳ ಗಾನಕ್ಕಿಂತ ಮನೋಹರವಾದ ಗಾನಗಳನ್ನು ಹಾಡುತ್ತ ವೀಣೆಯನ್ನು ನುಡಿಸುತ್ತ ನಾವಿಕರ ಮನಸ್ಸನ್ನು ತನ್ನ ಕಡೆ ಆಕರ್ಷಿಸಿ ಅವರ ವಿಪತ್ತನ್ನು ಹೋಗಲಾಡಿಸಿದನು.

೧೦೨. ಅನಂತರ ಅವರು ಅಲ್ಲಿಂದ ಎಷ್ಟೋ ಸುತ್ತಿಕೊಂಡು ಸಿಸಿಲಿ ಎಂಬ ದ್ವೀಪದ ಬಳಿಗೆ ಬಂದರು. ಅದರ ಪೂರ್ವತೀರದ ಸಮೀಪದಲ್ಲಿದ್ದ ಎತ್ತರವಾದ ಒಂದು ಪರ್ವತಶಿಖರದಿಂದ ದಟ್ಟವಾದ ಕಪ್ಪನೆಯ ಹೊಗೆಯು ಎದ್ದು ಆ ಶಿಖರದ ಸುತ್ತಮುತ್ತಲೂ ಕತ್ತಲೆಯನ್ನುಂಟುಮಾಡುತ್ತಿದ್ದಿತು; ಭೂಮಿಯೊಳಗೆ "ಗುಡು, ಗುಡು" ಎಂಬ ಶಬ್ದವು ಕೇಳಿಸುತ್ತಿದ್ದಿತು. ಆಗ ನಾವಿಕರಲ್ಲಿ

ಅನೇಕರು ತಮ್ಮ ಗುರುವಾದ ಖೈರನ್ನಿನ ಬೋಧನೆಯನ್ನು ನೆನೆದುಕೊಂಡು ಪುರಾಣಪ್ರಸಿದ್ಧವಾದ "ಎಟ್ನಾ" ಎಂಬ ಜ್ವಾಲಾಮುಖಿಯು ಅದೇ ಎಂದು ನಿರ್ಧರಿಸಿಕೊಂಡರು. ಗ್ರೀಕರ ಪುರಾಣದ ಒಂದು ಕಥೆಯ ಮೇರೆಗೆ ಆ ಜ್ವಾಲಾಮುಖಿಯ ಒಳಭಾಗದಲ್ಲಿಯೇ ಹೆಫೆಸ್ಟಸ್ಸಿನ ಕುಲುಮೆಗಳಲ್ಲಿ ಯಾವಾಗಲೂ ಕೆಲಸ ನಡೆಯುತ್ತಿದ್ದಿತಂತೆ! ಮತ್ತೊಂದು ಕಥೆಯ ಮೇರೆಗೆ ಆ ಜ್ವಾಲಾಮುಖಿಯೊಳಗಡೆಯಲ್ಲಿ ದೇವದೇವನು ಒಬ್ಬಾನೊಬ್ಬ ರಾಕ್ಷಸನನ್ನು ಬಂಧಿಸಿಟ್ಟಿದ್ದನಂತೆ!

೧೦೩. ಇಲ್ಲಿಂದ ಸ್ವಲ್ಪದೂರ ಪ್ರಯಾಣಮಾಡಿದ ಬಳಿಕ ನಾವಿಕರು ಒಂದು ಜಲಸಂಧಿಯ ಬಳಿಗೆ ಬಂದರು. ಅದರ ಒಂದು ಪಾರ್ಶ್ವದಲ್ಲಿ ವಿಕಾರರೂಪವಾಗಿ ಹರಡಿಕೊಂಡಿದ್ದ ಒಂದು ಬಂಡೆಯೂ, ಮತ್ತೊಂದು ಪಾರ್ಶ್ವದಲ್ಲಿ ದಿನಕ್ಕೆ ಮೂರಾವೃತ್ತಿ ಭಯಂಕರವಾದ ರಭಸವನ್ನು ಪ್ರದರ್ಶಿಸುತ್ತಿದ್ದ ಒಂದು ಸುಳಿಯೂ ಇದ್ದುವು. ಬಂಡೆಗೆ ಸಿಲಾ್ಲ ಎಂದೂ, ಸುಳಿಗೆ ಖ್ಯಾರಿಬ್ಡಿಸ್ ಎಂದೂ ಹೆಸರುಗಳಿದ್ದುವು. ಅವುಗಳಿಗೆ ಸಿಕ್ಕದೆ ಸುರಕ್ಷಿತವಾಗಿ ತಪ್ಪಿಸಿಕೊಂಡು ಬಂದ ದೋಣಿಗಳೇ ಆ ಕಾಲದಲ್ಲಿ ಅಪೂರ್ವವಾಗಿದ್ದುವು. ಆದುದರಿಂದ ನಾವಿಕರೆಲ್ಲರೂ ಅವಕ್ಕೆ ಬಹಳ ಹೆದರುತ್ತಿದ್ದರು. ಈ ಬಂಡೆಯು ಪೂರ್ವದಲ್ಲಿ ಒಬ್ಬ ಸುಂದರಿಯಾಗಿದ್ದಳಂತೆ. ಅವಳು ಸರ್ಸಿಯ ಅಸೂಯೆಗೆ ಗುರಿಯಾಗಿ ಮಾರ್ಪಟ್ಟಳೆಂದು ಆ ಕಾಲದಲ್ಲಿ ಕಥೆಯನ್ನು ಹೇಳಿಕೊಳ್ಳುತ್ತಿದ್ದರು.

೧೦೪. ಸುಳಿಬಂಡೆಗಳ ಗಂಡವನ್ನೂ ತಪ್ಪಿಸಿಕೊಂಡು ಆರ್ಗೋನಾವೆಯು, ಸರ್ಸಿಯು ವಾಸವಾಗಿದ್ದ ದ್ವೀಪಕ್ಕೆ ಬಂದಿತು. ಸಮುದ್ರತೀರದಲ್ಲೆಲ್ಲಾ ಹುಲಿ ಸಿಂಹ ಕರಡಿಗಳೂ ತೋಳಸಿವಂಗಿಗಳೂ ಇನ್ನೂ ಬಗೆಬಗೆಯ ಮೃಗಗಳೂ ವಿಕಾರವಾಗಿ ಅರಚುತ್ತ ಓಡಾಡುತ್ತಿದ್ದುವು. ಆದರೆ ಅವು ಮೀಡಿಯಳನ್ನು ಕಂಡಕೂಡಲೆ ತಮ್ಮ ಕೂಗುಗಳನ್ನು ನಿಲ್ಲಿಸಿ ಆ ನಾವಿಕರೊಡನೆ ಸರ್ಸಿಯ ಅರಮನೆಯ ಒಳಿಗೆ ಬಂದುವು. ಸರ್ಸಿಯು ಒಳಗಿನಿಂದ ಬಂದು ಮೀಡಿಯಳನ್ನೂ ಅವಳ ಸಂಗಡಿಗರನ್ನೂ ಆದರದಿಂದ ಬರಮಾಡಿಕೊಂಡು ಅಲ್ಲಿಗೆ ಬರುವುದಕ್ಕೆ ಮುಂಚೆ ಆ ಮೃಗಗಳೆಲ್ಲವೂ ಮನುಷ್ಯರೇ ಆಗಿದ್ದುವೆಂದು ಮೀಡಿಯಳು ಜೇಸನ್ನಿಗೆ ತಿಳಿಸಿದಳು. ಅಬ್ಸರ್ಟಸ್ಸನ್ನು ಮೀಡಿಯಳು ಕೊಂದುಹಾಕಿದ್ದ ವೃತ್ತಾಂತವನ್ನು ಸರ್ಸಿಯು ತತ್ಕ್ಷಣವೇ ತಿಳಿದುಕೊಂಡಿದ್ದರೂ, ಅತಿಥಿಸತ್ಕಾರಗಳನ್ನು ಮಾಡುವುದಕ್ಕೆ ಮೊದಲೇ ಆ ಸುದ್ದಿಯನ್ನೆತ್ತಲು ಇಚ್ಛಿಸದೆ ಸತ್ಕಾರಕಾರ್ಯಗಳಲ್ಲಿ ಆಕೆಯು ನಿರತಳಾಗಿದ್ದಳು. ಆದರೆ ಆಕೆಯ ಮನೋಭಿಪ್ರಾಯವು ಮೀಡಿಯಳಿಗೆ ತಿಳಿಯು

ರಿದಲ್ಲಿಲ್ಲ. ಆದುದರಿಂದ ಅವಳು ಜೇಸನ್ನಿಗೆ ಸನ್ನೆ ಮಾಡಿ ಅಗ್ನಿಸ್ಥಾನದ ಬಳಿಗೆ ಅವನನ್ನೂ ತಟ್ಟನೆ ಕರೆದುಕೊಂಡು ಹೋಗಿ ಅಲ್ಲಿದ್ದ ಬೂದಿಯನ್ನು ಬಳಿದುಕೊಳ್ಳುವಂತೆ ಹೇಳಿ ತಾನೂ ಹಾಗೆಯೇ ಮಾಡಿದಳು. ಪ್ರತೀಕಾರೇಚ್ಛುಗಳಿಂದ ತಪ್ಪಿಸಿ ರಕ್ಷಿಸಬೇಕೆಂದು ಪ್ರಾರ್ಥಿಸಿಕೊಳ್ಳಬೇಕೆಂದಿದ್ದವರು ಹೀಗೆ ಮಾಡುತ್ತಿದ್ದುದು ಗ್ರೀಕರಲ್ಲಿ ಪದ್ಧತಿಯಾಗಿದ್ದಿತು. ಸರ್ಸಿಯು ಅವರ ಆ ಕಾರ್ಯವನ್ನು ಕಂಡು ಕನಿಕರದಿಂದ ಅವರ ಕೈಯಲ್ಲಿ ಕೆಲವು ಪ್ರಾಯಶ್ಚಿತ್ತಕರ್ಮಗಳನ್ನು ಮಾಡಿಸಿದಳು. ಅವುಗಳಿಂದ ದೇವತೆಗಳ ಕೋಪವು ಸ್ವಲ್ಪ ಶಾಂತವಾದರೂ, ಜೇಸನ್ನನೂ ಮಿಾಡಿಯಳೂ ದಂಪತಿಗಳಾದಾಗ ಅವರ ದಾಂಪತ್ಯವು ಚಿರಕಾಲ ನಡೆಯಲಿಲ್ಲ. ಸರ್ಸಿಯು ನಾವಿಕರನ್ನು ಕುರಿತು "ನಿಮ್ಮ ಪ್ರಯಾಣವು ಇನ್ನು ಕೆಲವು ದಿನಗಳಲ್ಲಿಯೇ ಮುಗಿಯುವುದು ; ಪೀಲಿಯಾಸನು ಈಗ ಅತ್ಯಂತಕ್ರೂರಿಯಾಗಿರುವನು ; ಅವನು ಈಚೆಗೆ ಏಸನ್ನಿನ ಕಣ್ಣುಗಳನ್ನು ಕೀಳಿಸಿಬಿಟ್ಟಿರುವನು. ಆದರೆ ನನ್ನಿಂದ ಅನೇಕ ಮಣಿಮಂತ್ರೌಷಧಗಳನ್ನು ತಿಳಿದುಕೊಂಡಿರುವ ಈ ಮಿಾಡಿಯಳು ಏಸನ್ನಿನ ಅಂಧತ್ವವನ್ನೂ ವಾರ್ಧಕ್ಯವನ್ನೂ ಹೋಗಲಾಡಿಸುವಳು" ಎಂದು ಹೇಳಿ ಅವರನ್ನು ಕಳುಹಿಸಿಕೊಟ್ಟಳು.

೧೦೫. ಆರ್ಗೋನಾವಿಕರು ಬೇಗಬೇಗನೆ ಪಯಣಮಾಡಿಕೊಂಡು ಕೆಲವು ದಿನಗಳೊಳಗಾಗಿ ಐಯಾಲ್ಕಾಸಿನ ಬಳಿಯ ಸಮುದ್ರತೀರಕ್ಕೆ ಬಂದರು. ಅವರನ್ನು ಇದಿರುಗೊಳ್ಳುವುದಕ್ಕೆ ಅಲ್ಲಿಯ ಜನರು ತಂಡತಂಡವಾಗಿ ಬಂದು ಕುತೂಹಲದಿಂದ ನೋಡುತ್ತಿದ್ದರು. ಪೀಲಿಯಾಸಿಗೆ ಮನಸ್ಸಿಲ್ಲದಿದ್ದರೂ, ಅಪವಾದಬಂದೀತೆಂದು ಹೆದರಿ ಬಹಳ ಬೂತಾಟಿಕೆಯಿಂದ ಜೇಸನ್ ಮೊದಲಾದವರನ್ನು ಆದರಿಸಿದನು. ಆದರೆ ಮಿಾಡಿಯಳಿಗೆ ಅವನ ಮನಸ್ಸಿನಲ್ಲಿದ್ದ ಘೋರವಾದ ಆಲೋಚನೆಗಳೆಲ್ಲವೂ ಚೆನ್ನಾಗಿ ಗೊತ್ತಿದ್ದುವು. ಅವಳು ಅವುಗಳನ್ನು ಕುರಿತು ಜೇಸನ್ನಿಗೆ ರಹಸ್ಯವಾಗಿ ತಿಳಿಸಿದುದಲ್ಲದೆ ಪೀಲಿಯಾಸಿಗೆ ತಕ್ಕ ಶಿಕ್ಷೆಯನ್ನು ಶೀಘ್ರವಾಗಿಯೇ ಮಾಡುವುದಾಗಿಯೂ ಹೇಳಿದಳು. ಏಸನ್, ಜೇಸನ್ ಇವರಿಬ್ಬರೂ ಹೆರ್ಕ್ಯುಲೀಸ್ ಆರ್ಫಿಯಸ್ ಮುಂತಾದ ಆರ್ಗೋನಾವಿಕರ ಉಪಕಾರವನ್ನು ಶ್ಲಾಘಿಸಿ ಅವರನ್ನು ಬಹಳ ಕೃತಜ್ಞತೆಯಿಂದ ವಂದಿಸಿ ವಸ್ತ್ರಭೂಷಣಾದಿಗಳನ್ನು ಕೊಟ್ಟು ಅವರವರ ಊರುಗಳಿಗೆ ಕಳುಹಿಸಿಕೊಟ್ಟರು. ಮಿಾಡಿಯಳು ಉಪಾಯದಿಂದ ಪೀಲಿಯಾಸಿನ ಹೆಣ್ಣುಮಕ್ಕಳ ಸಾಹಾಯ್ಯವನ್ನು ಪಡೆದು ಅವರ ಸಮಕ್ಷದಲ್ಲಿ ಏಸನ್ನನ್ನು ಮೂಲಿಕೆಗಳಿದ್ದ ಒಂದು ಕಡಾಯಿಯಲ್ಲಿ ಬೇಯಿಸಿ ಅವನ ಅಂಧತೆಯನ್ನೂ ವಾರ್ಧಕ್ಯ

ವನ್ನೂ ಹೋಗಲಾಡಿಸಿದಳು. ಪೀಲಿಯಾಸಿನ ಹೆಣ್ಣುಮಕ್ಕಳೂ ತಮ್ಮ ತಂದೆಯ ವಾರ್ಧಕ್ಯವನ್ನೂ ಹೋಗಲಾಡಿಸಬೇಕೆಂದು ಬೇಡಿಕೊಳ್ಳಲು, ಮಿಾಡಿಯಳು ಪೀಲಿಯಾಸನ್ನು ಕೊಂದು ಅವನ ದೇಹವನ್ನು ಕತ್ತರಿಸುವಂತೆ ಅವರಿಗೆ ಬೋಧಿಸಿದಳು. ಅವರು ಅದೇ ಪ್ರಕಾರ ಮಾಡಿದ ಬಳಿಕ ಅವಳು ಪೀಲಿಯಾಸಿಗೆ ಪ್ರಾಣಬರುವಂತೆ ಮಾಡದೆಹೋದುದರಿಂದ ಏಸನ್ನನೇ ಐಯಾಲ್ಕಾಸ್ ರಾಜ್ಯಕ್ಕೆ ಪುನಃ ದೊರೆಯಾದನು.

೧೦೬. ಜೇಸನ್ನನು ಬಹುಕಾಲದವರೆಗೆ ಭಕ್ತಿಯಿಂದ ಪಿತೃಶುಶ್ರೂಷೆಯನ್ನು ಮಾಡುತ್ತ ಅನೇಕ ಸಾಹಸಕಾರ್ಯಗಳನ್ನು ನೆರವೇರಿಸುತ್ತ ಎಲ್ಲರ ಗೌರವಕ್ಕೂ ಪಾತ್ರನಾಗಿದ್ದನು. ಅವನಿಗೂ ಕ್ರೂರಳಾದ ಮಿಾಡಿಯಳಿಗೂ ಸರಿಹೋಗದೆ, ಮಿಾಡಿಯಳು ಐಯಾಲ್ಕಾಸನ್ನು ಬಿಟ್ಟು ಅಥೇನ್ಸ್ ಎಂಬ ಪ್ರಸಿದ್ಧವಾದ ಪಟ್ಟಣಕ್ಕೆ ಮಧ್ಯರಾತ್ರಿಯಲ್ಲಿ ಹೊರಟುಹೋದಳು. ಕೆಲವು ದಿನಗಳವರೆಗೂ ಅವಳ ಸಮಾಚಾರವೇ ಯಾರಿಗೂ ತಿಳಿಯದು. ಅವಳನ್ನು ಕುಳ್ಳಿರಿಸಿಕೊಂಡು ರೆಕ್ಕೆಯಸರ್ಪಗಳು ಆಕಾಶದಲ್ಲಿ ಒಂದು ರಥವನ್ನು ಎಳೆದುಕೊಂಡುಹೋಗುತ್ತಿದ್ದುದನ್ನು "ನಾನು ಕಂಡೆನು! ಅವನೂ ಕಂಡನು!" ಎಂದು ಐಯಾಲ್ಕಾಸಿನ ಕೆಲವರು ಮುದುಕರು ಮಾತನಾಡಿಕೊಳ್ಳುತ್ತಿದ್ದುದರಿಂದ, ಮಿಾಡಿಯಳು ಎಲ್ಲಿಗೆ ಹೊರಟುಹೋದಳೆಂಬುದು ಜನರೆಲ್ಲರಿಗೂ ತಿಳಿಯಿತು. ಆ ಕ್ರೂರಯಾದ ಮಾಯಗಾತಿಯು ತಮ್ಮ ರಾಜ್ಯದಿಂದ ಹೊರಟುಹೋದುದಕ್ಕಾಗಿ ಐಯಾಲ್ಕಾಸಿನ ಜನರೆಲ್ಲರೂ ಸಂತೋಷಿಸಿದರೇ ಹೊರತು ಯಾರೂ ವ್ಯಸನಪಡಲಿಲ್ಲ.

**ಯವನಪುರಾಣಕಥಾವಳಿಯಲ್ಲಿ ಮೊದಲನೆಯ ಗ್ರಂಥವು**

**ಸಂಪೂರ್ಣವು.**

